# SUPPLY AGENCY LIMITED

## UDIPI, : : : : : : S. INDIA.

*PROPRIETORS:*

SRI BHARATA VASTU MANDIRA,
- - - THULUNAD PRESS, - - -
- MANIPAL POWER PRESS, -
THULUNAD STATIONERY MART,
ANTARANGA - - - ETC. ETC.

| Authorised Capital: | | Paid up Capital: |
|---|---|---|
| Rs. 1,00,000/- | – | Rs. 30,500/- |

## Rates of Interest for Deposits

**Fixed Deposits:**

| | | | | |
|---|---|---|---|---|
| *4* | *to* | *6* | *Months* .... | *4%* |
| *7* | ,, | *11* | ,, .... | *5%* |
| *12* | ,, | *18* | ,, .... | *6* |

*Special Rates for Deposits of 2 Years & above.*

**Deenabandhunidhi:** *Withdrawable at a Week's Notice; interest at 6¼% calculated on every 5 Rupees of daily balances. Even small amounts may be deposited.*

**Industrial Deposits:** *One Rupee per month for 45 months pays you Rs. 50/- after 45 months. Also other denominations accepted.*

**Save As You Please:** *Any amount may be deposited at your own convienence. 6¼ cumulative interest runs on every full rupee. Payable after 5 years.*

*For other forms of Deposits write to the Manager,*

**Finance Department,**
Vyasa Bhavan, UDIPI.

This Page is available for Advertisement. Rate Rs. 15/- [per insertion.]

# ANTARANGA

**KANARESE WEEKLY MAGAZINE**

PROPRIETORS:
SUPPY AGNCY LIMITED, UDIPI.
PRINTED AT THE
MANIPAL POWER PRESS, UDIPI.

# ಅಂತರಂಗ

**ಕನ್ನಡ ವಾರ ಪತ್ರಿಕೆ - - ಉಡುಪಿ**

ವರ್ಷ ೧ ] ✠ [ ಸಂಚಿಕೆ ೨೪

ಆದಿತ್ಯವಾರ, ದಶಂಬರ ೨೫, -'೩೮.





**ವಾರ್ಷಿಕ ಚಂದಾ: ಮೂರು ರೂಪಾಯಿ.**
**ಬಿಡಿ ಸಂಚಿಕೆ: ಒಂದಾಣೆ**

**ವಿ. ಪಿ. ಕ್ರಮವಿಲ್ಲ. ಹಣವನ್ನು ಮುಂಗಡವಾಗಿ ಕಳುಹಬೇಕು.**

ಆದಿತ್ಯವಾರ
ದಶಂಬರ ೨೫, ೧೯೩೮

# ಅಂತರಂಗ

ಸಂಪುಟ ೧
ಸಂಚಿಕೆ ೨೪

## ಏಕೀಕರಣದ ಪ್ರತಿಧ್ವನಿ!

ಏಕೀಕರಣದ ಕೂಗು ಕೊನೆಗೆ ದಕ್ಷಿಣ ಕನ್ನಡದಲ್ಲಿಯೂ ಪ್ರತಿಧ್ವನಿಸುವಂತಾಯಿತು! ಸಂತೋಷದ ವಿಚಾರವೆನ್ನಿ. ಈ ಸ್ವರದ ಮಧ್ಯದಲ್ಲಿ ಕೆಲವು ಅಪಸ್ವರಗಳೂ ಪ್ರತಿಧ್ವನಿಸಲಾರಂಭಿಸಿವೆ. ಇದರಲ್ಲೇನೂ ಆಶ್ಚರ್ಯವಿಲ್ಲ. ಕಾರಣ—ಸ್ವರದೊಡನೆ ಅಪಸ್ವರವಿರಬೇಕೆಂಬ ನಿಯಮವಿಲ್ಲದಿದ್ದರೂ ಸರ್ವಸಾಮಾನ್ಯವಾಗಿ ಅದು ಇದ್ದೇ ಇರುತ್ತದೆ.

೦ ೦

'ಮದ್ರಾಸ್ - ಬೊಂಬಾಯಿ ಕರ್ನಾಟಕಗಳಲ್ಲಿರುವ ನಾವುಗಳು ಮೈಸೂರು ಸಂಸ್ಥಾನದ ಆಡಳಿತದ ಕಟ್ಟಿಗೆ ನಮ್ಮನ್ನು ಒಳಗು ಮಾಡಿಕೊಂಡು ನಮಗೆ ಈಗ ಸಿಕ್ಕಿರುವ ಒಂದು ರೀತಿಯ ಸ್ವಾತಂತ್ರ್ಯವನ್ನು ಏಕೀಕರಣದಂತಹ ಪ್ರಾಮುಖ್ಯ ಧ್ಯೇಯಸಾಧನೆಗಾಗಿ ಸಂತೋಷದಿಂದ ತ್ಯಾಗ ಮಾಡಬೇಕು.' ದಕ್ಷಿಣ ಕನ್ನಡದ ಶ್ರೀ. ಯಸ್. ಯನ್. ಹೊಳ್ಳರ ಸೂಚನೆಯಿದು! ಸ್ವತಃ 'ರಸಿಕ'ರಾದುದರಿಂದ ಈ ಸೂಚನೆಯನ್ನು ಅವರು ಕೊಟ್ಟಿರುವುದರಲ್ಲಿ ಆಶ್ಚರ್ಯಕ್ಕೆ ಎಡೆಯಿಲ್ಲ.

೦ ೦

ಈ 'ಮಹಾ' ಸೂಚನೆಯು ಮೂಲೆ ಮೂಲೆಗಳಲ್ಲಿ! ಪ್ರತಿಧ್ವನಿಸುವ ಮೊದಲೇ ಜಿಲ್ಲೆಯ ಒಂದು ಪತ್ರಿಕೆಯಲ್ಲಿ ಸಮಸ್ಯಾತ್ಮಕ ಹೆಸರನ್ನಾಂತ ಶ್ರೀ ---ಯವರು ಧಾರವಾಡದ ಮಹನೀಯರೊಬ್ಬರಿಗೆ ಉತ್ತರವೀಯುತ್ತಾ ಹಲವಾರು ವಿಧದ ಭವಿಷ್ಯಗಳನ್ನು ಹೇಳಿದ್ದಾರೆ.

ಕರ್ನಾಟಕ ಪ್ರಾಂತೀಕರಣದಿಂದ ದಕ್ಷಿಣ ಕನ್ನಡಕ್ಕೆ ಪ್ರಯೋಜನ ಸಿಗುವಂತಿಲ್ಲವೆಂಬುದೇ ಅವರ

'ಜರ್ಮನಿಗೆ ತಲೆಬಗ್ಗಿಸಬಾರದು.'



'ಜರ್ಮನಿಗೆ ಇಂಗ್ಲಂಡು ತಲೆತಗ್ಗಿಸಬಾರದು. ಈಗಿನ ಬ್ರಿಟಿಷ್ ಮಂತ್ರಿಮಂಡಲದ ಧೋರಣೆಯನ್ನು ಮುಂದರಿಸುತ್ತಾ ಹೋದರೆ ಜರ್ಮನಿಗೆ ಶರಣೆನ್ನಬೇಕಾಗುವುದು' ಎಂಬ ಎಚ್ಚರಿಕೆಯಿತ್ತಿರುವ ಲಾಯಡ್ ಜಾರ್ಜರು.

'ವಾದ'ವ ತಿರುಳೆಂದು ಕಾಣುತ್ತದೆ.

೦ ೦

ಸಮಸ್ಯಾತ್ಮಕ ಅನಾಮಧೇಯರ ವಾದವನ್ನು ಕಂಡು ಶ್ರೀ. ಕೋಟ ಶಿವರಾಮ ಕಾರಂತರು ಅದನ್ನು 'ತೀರಾ ಪಿಕಲಾಟದ ವಾದವಾಗಿದೆ' ಎಂದು ಹೇಳಿದ್ದಾರೆ. ಅಷ್ಟೂ ಸಾಲದೆ ಲೇಖಕರು 'ಕೊಡಗಿನ ಜನರನ್ನು ಒಲಿಸಲು' ಆ ಲೇಖನ ಬರೆದಿರುವರೆಂದು ಹೇಳಿದ್ದಾರೆ.

೦ ೦

ಕರ್ನಾಟಕ ಪ್ರಾಂತ್ಯದಿಂದ ದಕ್ಷಿಣಕನ್ನಡಕ್ಕೆ ಪ್ರಯೋಜನವಿಲ್ಲವೆಂದು, ಕೆಲವು ವ್ಯಾಪಾರೀ ಕಾಂಗ್ರೆಸ್ ಧುರೀಣರು ಹೇಳುತ್ತಿರುವರೆಂಬುದು ಈಗಾಗಲೆ ತಿಳಿದು ಬಂದಿದೆ.

೦ ೦

'ಉಗ್ರ ಸಮತಾವಾದಿ'ಗಳ ವಾತಾವರಣದಲ್ಲಿರುವ ಶ್ರೀ. ಹೊಳ್ಳರು ಮದ್ರಾಸ್–ಮುಂಬಯಿ ಕರ್ನಾಟಕಗಳನ್ನೂ ಮೈಸೂರಿನೊಂದಿಗೆ ಸೇರಿಸಿ, ಆಶ್ರಿತ ರಾಜರ ಆಶ್ರಯವನ್ನು ಪಡೆಯಬೇಕೆಂದಿರುವುದು ಒಂದು ತರದ ಆಶ್ಚರ್ಯವೇ ಸರಿ. ಆಶ್ರಿತ ರಾಜ್ಯಗಳೊಡನೆ ಬ್ರಿಟಿಷ್ ಪ್ರಾಂತಗಳು ಸೇರದ ವಿನಾಃ ಕರ್ನಾಟಕ ಏಕೀಕರಣವಾಗಲು ಸಾಧ್ಯವಿಲ್ಲವೆ? ಮುಂಬಯಿ-ಮದ್ರಾಸ್ ಕರ್ನಾಟಕದವರು ಆ ಮೊದಲೇ ಒಂದಾಗಬಾರದೇಕೆ? ಇದನ್ನು ಆ ಸೂಚಕರು ಯೋಚಿಸದಿರಲಿಕ್ಕೆ ದೃಷ್ಟಿಭೇದವೇ ಕಾರಣವಾಗಿರಬಹುದು!

೦ ೦

ಕೊನೆಯದಾಗಿ ಶ್ರೀ. ಹೊಳ್ಳರ ಕೊನೆಯ ಸೂಚನೆ: 'ಇಚ್ಛಿತ ಫಲಪ್ರಾಪ್ತಿ'ಗಾಗಿ ಒಂದು ಪರಿಷತ್ತನ್ನು ಕರೆಯಬೇಕೆಂದು ಅವರು ಸೂಚಿಸಿ

ದ್ದಾರೆ. ಮುಂಬಯಿ-ಮದ್ರಾಸ್ಕರ್ನಾಟಕವನ್ನು ಮೈಸೂರಿಗೆ ಬಿಟ್ಟುಕೊಡುವುದೊಂದು, ಮೈಸೂರಿನ ನರೇಂದ್ರರು ಹೈದರಾಬಾದಿನ ನಿಜಾಮರಿಂದ ಹೈದರಾಬಾದಿನಲ್ಲಿರುವ ಕರ್ನಾಟಕದ ಭಾಗವನ್ನು ಕೇಳುವುದಿನ್ನೊಂದು- ಇವೆರಡು ವಿಧಾನಗಳನ್ನು ಜಾರಿಗೆ ತರುವುದೇ 'ಅಹಿಂಸಾತ್ಮಕ ವಿಧಾನ'ವೆಂದು ಅವರ ಅಂಬೋಣ.

೦ ೦

ಇನ್ನೊಂದು ರೀತಿಯಲ್ಲಿ ಹೇಳುವುದಿದ್ದರೆ ತಮ್ಮ ಪ್ರಜಾ ಸ್ವಾತಂತ್ರ್ಯವನ್ನು ವಿಕ್ರಯಿಸಿಕೊಂಡು, ಆಶ್ರಿತ ರಾಜರ ಆಶ್ರಯದಲ್ಲಿದ್ದುಕೊಂಡು ಹೇಗಾದರೂ ಏಕೀಕರಣ ಮಾಡಬೇಕೆಂಬುದೇ ಅವರ ಸೂಚನೆಯ ಸಾರ. ಇದಕ್ಕನ್ನಬೇಕಲ್ಲವೇ 'ಅಹಿಂಸಾತ್ಮಕ'ವಿಧಾನವೆಂದು!

೦ ೦

ಪ್ರಾಯಶಃ ಈ 'ಅಹಿಂಸಾತ್ಮಕ ವಿಧಾನ'ವು ನಮ್ಮ ಧುರೀಣರಿಗೆ ತಿಳಿದಿರಲಿಕ್ಕಿಲ್ಲ. ತಿಳಿದಿದ್ದರೆ ಸಮಗ್ರ ಭಾರತವನ್ನು ಮೊಣಗಾಲೂರಿ ಬ್ರಿಟಿಷರಿಗೆ ಮೊದಲೇ ಬಿಟ್ಟುಕೊಟ್ಟು, ಅವರು ಬಿಸಾಡಬಹುದಾದ ತಿಂಡಿ ಚೂರುಗಳನ್ನು ನಾವು ತಿನ್ನಬಹುದಿತ್ತು! ಈ ಸೂಚನೆಯನ್ನಿತ್ತಿರುವ ಹೊಳ್ಳರಿಗೆ ಏಕೀಕರಣ ಚಳವಳದವರು ಋಣಿಗಳಾಗಿರಬೇಡವೆ?

—'ಕನ್ನಡ ಕುವರ'

## ಇಷ್ಟೊಂದು ಮತ್ಸರವೇಕೆ?

ನ್ಯೂಜೆರ್ಸಿಯಲ್ಲಿ ಒಬ್ಬ ಫ್ಯಾಕ್ಟರಿ ಕೆಲಸಗಾರನಿದ್ದಾನೆ. ಲೂಯಿಸ್ ಟೊಟೊ ಗರಿಯೆಲ್ ಎಂದವನ ಹೆಸರು. ೨೪ ವರ್ಷ ಪ್ರಾಯದ ವಿಲ್ಮಾ ಲೀ ಕ್ರಾಫ್ಟ್ ಎಂಬಾಕೆ ಅವನ ಮುದ್ದು ಮಡದಿ ಇವರೊಳಗಿನ ಪ್ರೇಮವೆಂದರೆ ಬಹಳ ವಿಶೇಷ ತರದ್ದು. ತನ್ನ ಪತ್ನಿ ವಿಲ್ಮಾಳನ್ನು ಯಾರೂ ನೋಡಿ ಮಾತಾಡಬಾರದೆಂದು ಲೂಯಿಸನ ಆಶೆ. ತಾನು ಕೆಲಸಕ್ಕೆ ಹೋಗುವಾಗ ತನ್ನ ಹೃದಯೇಶ್ವರಿಯ ಕೈಕಾಲುಗಳನ್ನು ಸರಪಣಿಯಿಂದ ಕಟ್ಟಿ (ಬಿಗಿ



ಯುವುದಲ್ಲ!) ಮೋಟಾರು ಕಾರಿನೊಳಗೆ ಕುಳ್ಳಿರಿಸುವುದು ಅವನದೊಂದು ವಾಡಿಕೆ. ಒಂದು ದಿನ ಒಬ್ಬ ಪೋಲೀಸಿನವನು ಈ ಕರುಣಾಜನಕ ದೃಶ್ಯ ಕಂಡ.

"ನಿನ್ನನ್ನು ಕಟ್ಟಿ ಹಾಕಿದವರ್‍ಯಾರು?"

"ನನ್ನ ಗಂಡ"' ಎಂದಾಕೆಯ ಉತ್ತರ. ಪೋಲೀಸನವನಿಗೆ ಆಶ್ಚರ್ಯವಾಯಿತು.

"ನಿನ್ನನ್ನು ಬಿಡುವ ಕ್ರಮವೇ ಇಲ್ಲವೇನು?"

"ಉಂಟು. ಮಧ್ಯಾಹ್ನ ಮತ್ತು ಸಾಯಂಕಾಲ"

ಇಷ್ಟಾಗುವಾಗ ಲೂಯಿಸ್ ಬಂದೇ ಬಂದ. ಪೋಲೀಸಿನವನು ಇನಿಯಳೊಡನೆ ಮಾತಾಡುವುದನ್ನು ಕಂಡು ಅವನಿಗೆ ತಡೆಯಲಾರದ ಮತ್ಸರವುಂಟಾಯಿತು. ಪೋಲೀಸಿನವನು ಇನ್ನು ಮುಂದೆ ಹಾಗೆ ಕಟ್ಟಿ ಹಾಕಬಾರದೆಂದು ಎಚ್ಚರಿಕೆಯಿತ್ತ. ಕೂಡಲೇ ವಿಲ್ಮಾ ಹೇಳಿದಳು:

"ಅದರಲ್ಲೇನು ಬೇಸರವಿಲ್ಲ, ನನ್ನ ಗಂಡ ನನ್ನನ್ನು ಅತಿಯಾಗಿ ಪ್ರೀತಿಸುತ್ತಾನೆ".

# ಪಾಶ್ಚಾತ್ಯ ಹಾಸ್ಯ ಕಲಾಕೋವಿದ ವಾಲ್ಟರ್ ಡಿಸ್ನಿ

## ಗೊಂಬೆಗಳಿಗೆ ಜೀವದಾನ ಮಾಡಿದ ಕಲಾವಿದನ ಜೀವಮಾನದ ಕಥೆ.



ವಾಲ್ಟರ್ ಡಿಸ್ನಿ

ಬರೆದವರು:

ಶ್ರೀ. ಕೊಪ್ಪದ ರಾಮಸ್ವಾಮಿ ಐಯ್ಯಂಗಾರ್

ಅಮೇರಿಕಾ ಸಂಯುಕ್ತ ರಾಜ್ಯದಲ್ಲಿಯ ಚಲನಚಿತ್ರದ ಕೇಂದ್ರವಾದ 'ಹಾಲೀವುಡ್' ಎಂಬ ಸ್ಥಳದಲ್ಲಿ ಒಂದು ಬಿಳಿಯಬಣ್ಣದ ಉತ್ತಮವಾದ ಮಂದಿರವು ಇರುವುದು. ಇದೇ ಮಿಕ್ಕಿಮೌಸ್ (ಗೊಂಬೆ ಆಟ ಪ್ರದರ್ಶಕ ಮಂದಿರ) ನಿವಾಸಮಂದಿರವು.

ಇಂಗ್ಲೀಷ್ ಭಾಷೆಯಲ್ಲಿ 'ಮಿಕ್ಕಿ ಮೌಸ್' ಎಂದರೆ ಎಲ್ಲರಿಗೂ ಗೊತ್ತಿರುವ ಸಂಗತಿಯಾಗಿದೆ. ಜನಸಾಮಾನ್ಯರಿಗೆಲ್ಲ ಹೊಟ್ಟೆ ಚಕ್ಕುಲಿ ಬಿಕ್ಕುಲಿ ಪಡುವಂತೆ ನಕ್ಕು ನಗಿಸುವುದೆ ಈ ವಿನೋದದ ರೂಪವು. ಆ ದೊಡ್ಡ ಕಿವಿಗಳು, ಆ ಉದ್ದವಾದ ಬಾಲ, ಆ ಚಿತ್ರವಿಚಿತ್ರವಾದ ಚೇಷ್ಟೆಗಳು ಇವುಗಳನ್ನು ನೋಡಲು (ಈ ಚಲನಚಿತ್ರ ಪ್ರದರ್ಶನವನ್ನು ನೋಡಲು) ಸಾವಿರಾರು ಮಂದಿಯು ಹೋಗುತ್ತಿರುವರು. ಅಭಿನಯದಿಂದಲೂ, ಸಂಗೀತರಸದಿಂದಲೂ ಕಲೆತು, ಈ ಮಿಕ್ಕಿಯು ಅದ್ಭುತವಾದ ಚರ್ಯೆಗಳನ್ನು ಪ್ರದರ್ಶಿಸುತ್ತಿರುವುದರಿಂದ ನೋಟಕರಿಗೆ ಬಹು ತಮಾಷೆಯು ತಲೆದೋರುತ್ತಿರುವುದು.

ಈ ಮಿಕ್ಕಿ ನಾಮಾಂತರವಾದ ಗೊಂಬೆ ಆಟದ ವಿನೋದವನ್ನು ಕಲ್ಪಿಸಿದವರು ಯಾರೆಂಬುದು ಗೊತ್ತೆ? ಈತನೇ ವಾಲ್ಟರ್ ಡಿಸ್ನೀ ಎಂಬಾತನು. ಈ ವಿಚಿತ್ರ ರೂಪ ಕಲ್ಪನೆಯ ಶಿಲ್ಪಿಯು ಈತನೇ.

೦೦ ೦೦

### ವಾಲ್ಟರ್ ಡಿಸ್ನಿಯ ಕುಟುಂಬದ ಕಥೆ.

ವಾಲ್ಟರ್ ಡಿಸ್ನಿಯು ೧೯೦೧ನೆ ಇಸ್ವಿಯ ಡಿಸೆಂಬರ ಮಾಹೆಯಲ್ಲಿ ಚಿಕಾಗೋ ನಗರದಲ್ಲಿ ಹುಟ್ಟಿದನು. ಇವನಿಗೆ ಮೂವರು ಒಡಹುಟ್ಟಿದವರು; ಒಬ್ಬ ಸಹೋದರಿಯು ಇದ್ದರು. ಇವನ ತಂದೆಯು ಪಾತ್ರೆಗಳಿಗೆ ಕಲಾಯಿ ಮಾಡುವವನು. ಪಾತ್ರೆಗಳನ್ನು ತಯಾರಿಸುತ್ತಿದ್ದನು. ಬಾಲ್ಯದಲ್ಲಿ ಈ ಬಾಲಕನು ಎಂದಿನ ಹುಡುಗರಂತೆಯೇ ಇದ್ದನು. ಆದರೆ ಚಿತ್ರ ಬರೆಯುವುದೆಂದರೆ ಇವನಿಗೆ ಚಿಕ್ಕಂದಿನಿಂದ ಅಭಿಮಾನವಾಗಿದ್ದಿತು. ಮನೆಯಲ್ಲಿ ಮತ್ಯಾರಿಗೂ ಕಲಾಭಿರುಚಿಯು ಇಲ್ಲದೆಹೋದರೂ ಡಿಸ್ನೀಗೆ ಅದು ಹೇಗೊ ತಲೆಹಿಡಿದಿತ್ತು. ವರ್ತಮಾನ ಪತ್ರಿಕೆಗಳಿಗೆ ವ್ಯಂಗ್ಯ ಚಿತ್ರಗಳನ್ನು (*Cartoons*) ಬರೆದು, ಪ್ರಕಟಿಸಬೇಕೆಂದು ಇವನು ಆಶಿಸಪಡುತ್ತಾ ಇದ್ದನು. ಇದೂ ಅಲ್ಲದೆ ಇವನಿಗೆ ಅಭಿನಯವೆಂದರೂ ಕೂಡ ಆಗಿನ ಕಾಲದಲ್ಲಿಯೇ ಆಸಕ್ತಿಯು

ಉಂಟಾಗಿದ್ದಿತು. ಪಾಠಶಾಲೆಯಲ್ಲಿ ನಡೆಯಿಸುತ್ತಾಬಂದ ನಾಟಕಗಳಲ್ಲಿ ಬೆರೆಯುತ್ತಾ ಬಂದನು. ಒಂದುಸಲ ಚಾರ್ಲಿಚೇಪ್ಲಿನನನ್ನು ಅನುಕರಿಸುತ್ತಾ ಅಭಿನಯಿಸಿದ್ದರಿಂದ ಇವನಿಗೆ ಕೆಲವು ಬಹುಮಾನಗಳು ಕೂಡ ಬಂದವು. ಇವುಗಳಲ್ಲದೆ ವಿನೋದವಾದ ಆಟಗಳು ಕೂಡ ಇವನಿಗೆ ಅಭಿಮಾನಕಲೆಯಾಗಿದ್ದವು.

೦೦ ೦೦

**ಡಿಸ್ನಿಯು ಪಟ್ಟ ತೊಂದರೆಗಳು.**

ಇಪ್ಪತ್ತುವರ್ಷ ವಯಸ್ಸು ತುಂಬುವುದಕ್ಕೆ ಮೊದಲೇ ಡಿಸ್ನಿಯು ಅನೇಕ ಗಂದರಗೋಳಗಳಿಂದ ಅನುಭವಗಳನ್ನು ಸಂಪಾದಿಸಿದನು. ಕೆಲವು ದಿನ ರೈಲು ಸ್ಟೇಷನ್ ಬಳಿ ವರ್ತಮಾನ ಪತ್ರಿಕೆಗಳನ್ನು ಮಾರಿದನು. ಚಿಕಾಗೊ ನಾಟಕಶಾಲೆಯಲ್ಲಿ ನಟನಾಗಿ ದುಡಿದನು. ಆ ತರುವಾಯ ಕೆಲವು ಕಾಲ ಅಂಚೆಯ ಸೇವಕನಾಗಿ ಕೆಲಸ ಮಾಡಿದನು. ಆಗ್ಗೆ ಪ್ರಪಂಚದ ಯುದ್ಧದ ದಿನಗಳಾಗಿದ್ದವು. ಈ ಕಾರಣದಿಂದ ಆ ಕೆಲಸವನ್ನು ಕೂಡ ಇವನು ಬಿಟ್ಟುಬಿಟ್ಟನು. ಅಮೇರಿಕಾದವರ ರೆಡ್ ಕ್ರಾಸ್ ಸಂಘಕ್ಕೆ ಡ್ರೈವರಾಗಿ ಫ್ರಾನ್ಸು ದೇಶಕ್ಕೆ ತೆರಳಿದನು.

ಫ್ರಾನ್ಸು ದೇಶದಿಂದ ೧೯೧೯ನೆ ಇಸ್ವಿಯಲ್ಲಿ ಹಿಂತಿರುಗಿ ಸ್ವದೇಶಕ್ಕೆ ಬರುತ್ತಲೇ ಇವನಿಗೆ ಒಂದು ಕಲಾರಚಕ ನೌಕರಿಯು ಸಿಕ್ಕಿತು. ಕನ್ಸಾಸ್ ನಗರದಲ್ಲಿಯ ಒಂದು ಪ್ರಕಟನಾ ಕಂಪೆನಿಯಲ್ಲಿ ಈ ಕೆಲಸಕ್ಕೆ ಸೇರಿದನು. ಪ್ರಕಟನೆಗಳಿಗೆ ತಕ್ಕುದಾದ ಚಿತ್ರಗಳನ್ನು ಬರೆದುಕೊಡುವುದೇ ಇವನ ಕೆಲಸವು. ಕೆಲವು ದಿನಗಳ ಕಾಲ ಈ ವೃತ್ತಿಯಲ್ಲಿ ಕಾಲಹರಣಮಾಡಿದನು.

ಮತ್ತೆ ಕೆಲವು ದಿನಗಳಲ್ಲಿ ಚಿತ್ರಲೇಖನದಲ್ಲಿಯೇ ಹೊಸಕೆಲಸವನ್ನು ಮಾಡಬೇಕಾಯಿತು. ಕನ್ನಡಿಯ ಪಠಗಳಮೇಲೆ ವ್ಯಂಗ್ಯಚಿತ್ರಗಳನ್ನು ಬರೆಯಲು ಇವನನ್ನು ನೇಮಿಸಿದರು. ಸ್ಲಾಯಿಡ್‌ಗಳನ್ನು ತೆಗೆದುಕೊಂಡುಹೋಗಿ ಇವನನ್ನು ನೇಮಿಸಿಕೊಂಡಿದ್ದ ಕಂಪೆನಿಯವರು ಮೂವಿ ಪಿಕ್ಚರ್ ಶಾಲೆಗಳಲ್ಲಿ ಪ್ರದರ್ಶಿಸುತ್ತಾ ಬಂದರು. ಈ ಕಂಪೆನಿಯವರು ಸ್ವಂತವಾಗಿಯೇ ಕೆಲವು ವ್ಯಂಗ್ಯಚಿತ್ರಗಳನ್ನು ತಯಾರಿಸುತ್ತಾ ಬಂದು, ಸಾಧಾರಣ ಚಿತ್ರಗಳೊಂದಿಗೆ ಇವುಗಳನ್ನು ಕೂಡಿಸಿ ಚಲನೆಯಾಗುವಂತೆ ಪ್ರದರ್ಶಿಸಲಾರಂಭಿಸಿದರು.

೦೦ ೦೦

**ವ್ಯಂಗ್ಯವಾದ ಚಲನಚಿತ್ರ ನಿರ್ಮಾಣದ ಮೇಲೆ ಆಶೆ.**

ವ್ಯಂಗ್ಯಚಿತ್ರ ಫಿಲ್ಮ್‌ಗಳೆನ್ನಲ್ಪಡುವ ಈ ವಿನೋದ ಚಲನಚಿತ್ರಗಳನ್ನು ತಯಾರಿಸಬೇಕೆಂಬ ಆಶೆಯು ಡಿಸ್ನೀಗೆ ಉಂಟಾಯಿತು. ತಾನು ಇದ್ದ ಕಂಪೆನಿಯಿಂದ ಒಂದು ಹಳೆಯ ಮೂವಿಂಗ್ ಪಿಕ್ಚರ್ ಕೆಮರಾವನ್ನು ಬದಲು ತೆಗೆದುಕೊಂಡನು. ಕೆಳಕ್ಕೆ ಮೇಲೆ ಬಿದ್ದು, ಪ್ರಯೋಗಗಳ ಮೇಲೆ ಪರೀಕ್ಷೆ ಮಾಡುತ್ತಾ ಒಂದು ಸಣ್ಣ ವ್ಯಂಗ್ಯ ಸೂಚಕವಾದ ಚಲನಚಿತ್ರಗಳನ್ನು ಸ್ವಂತವಾಗಿ ತಯಾರಿಸಿದನು. ಕನ್ಸಾಸ್ ನಗರದಲ್ಲಿ ನಡೆಯುತ್ತಲಿದ್ದ ಕೆಲವು ಘಟನೆಗಳನ್ನು ಆ ಚಿತ್ರದಲ್ಲಿ ಪ್ರದರ್ಶಿಸಿದನು. ಈ ಫಿಲ್ಮನ್ನು ತೆಗೆದುಕೊಂಡುಹೋಗಿ ಇವನು ಒಂದು ಕಂಪೆನಿಗೆ ಮಾರಿಬಿಟ್ಟನು.

ಇದರಿಂದ ಆತನಿಗೆ ಒಂದು ದೊಡ್ಡ ಅಭಿಪ್ರಾಯವು ಭಾಸನಾಯಿತು. ತಾತ ಮುತ್ತಾತಂದಿರ ಕಾಲದ ಪುಟ್ಟಕಥೆಗಳನ್ನೇಕೆ ಫಿಲ್ಮ್ ತೆಗೆಯಬಾರದೆಂದು ಆಲೋಚಿಸಲಾರಂಭಿಸಿದನು. ಈ ಆಲೋಚನೆಯು ಹೊಳೆಯುತ್ತಲೇ ಕೆಲವು ಮಂದಿ ಯುವಕರನ್ನು ತನ್ನ ಸಹಾಯಕ್ಕೆ ಸೇರಿಸಿಕೊಂಡನು. ಅವರ ಸಹಾಯದಿಂದ ಆರು ಏಳು ಚಿತ್ರಗಳನ್ನು ತಯಾರಿಸಿದನು. ಅವುಗಳನ್ನು ಮಾರಲು ಬೇರೆಯಾಗಿ ಇವನು ಒಂದು ಕಂಪೆನಿಯನ್ನು ಮಾಡಿದನು. ಆದರೆ ಆ ಕಂಪೆನಿಯಿಂದ ಸಾಕಾದಷ್ಟು ಕೆಲಸವು ನಡೆಯದೆ ಹೋಯಿತು.

೦೦ ೦೦

**ಹಾಲೀವುಡ್ಡಿಗೆ ಪ್ರಯಾಣ.**

ಕೆಲವು ದಿನಗಳಲ್ಲಿ ಕನ್ಸಾಸ್ ನಗರದಿಂದ ವಾಸವನ್ನು ಎತ್ತಿಹಾಕಿ, ೧೯೨೩ನೇ ಅಗೋಸ್ತು ಮಾಹೆಗೆ ಹಾಲೀವುಡ್ಡಿಗೆ ಬಂದು ನೆಲೆಸಿದನು. ಕೈಯಲ್ಲಿ ಸಾಕಾದಷ್ಟು ಹಣವು ಇರಲಿಲ್ಲ. ಕನ್ಸಾಸ್ ನಗರದಲ್ಲಿ ಮಾಡಿದ್ದ ಸಾಲಸೋಲಗಳು ಹಾಗೆಯೇ ಇದ್ದವು. ಏನೋ ಅಲ್ಪಸ್ವಲ್ಪವಾಗಿ ತೀರಿಸಿ ಹಾಲೀವುಡ್ಡಿನಲ್ಲಿ ಸೇರಿಕೊಂಡನು.

ಆಗ ಡಿಸ್ನೀಯ ತಮ್ಮನಾದ ರಾಯ ಎಂಬವನು ಕಾಲಿಫೋರ್ನಿಯದಲ್ಲಿ ವಾಸವಾಗಿದ್ದನು. ಇಬ್ಬರೂ ಸೇರಿ ವ್ಯಾಪಾರವನ್ನು ಮುಂದರಿಸಬೇಕೆಂದು ನಿಶ್ಚಯಿಸಿಕೊಂಡರು. ರಾಯಿಯ ಬಳಿ ಸ್ವಲ್ಪ ಹಣವಿ

ದ್ದಿತು. ಪತ್ತಿ ಸ್ವಲ್ಪ ಹಣವನ್ನು ಸಾಲತೆಗೆದುಕೊಂಡು ಫಿಲ್ಮ್ ಗಳನ್ನು ತೆಗೆಯಲು ಕೈಹಾಕಿದರು. ನಾಲ್ಕೈದು ವರ್ಷಗಳ ಕಾಲ ಏನೇನೋ ಪುಟ್ಟಕಥೆಗಳನ್ನು ಕೈಕೊಂಡು ಚಿತ್ರಗಳನ್ನು ತಯಾರಿಸುತ್ತಾ ಬಂದರು. ಆದರೆ ಅಂದಿಗೆ ತಕ್ಕಷ್ಟು ಪ್ರೋತ್ಸಾಹವಾಗಲಿ, ಆದರವಾಗಲಿ ದೊರೆಯಲಿಲ್ಲ.

ಇದು ಸರಿಯಲ್ಲವೆಂದುಕೊಂಡು ಕಾರ್ಟೂನ್ ಫಿಲಂಗಳನ್ನು ಇನ್ನೊಂದು ವಿಧಾನದಲ್ಲಿ ತೆಗೆಯಲು ಪ್ರಾರಂಭಿಸಿದನು. ಇತರ ಚಲನಚಿತ್ರದ ಕಂಪೆನಿಯವರು ನಾಯಿಗಳನ್ನೂ, ಬೆಕ್ಕುಗಳನ್ನೂ, ಮೊಲಗಳನ್ನೂ ಉಪಯೋಗಿಸುತ್ತಿರುವುದು ನೋಡಿದನು. ಅವರು ಬಿಟ್ಟು ಬಿಟ್ಟಿರುವುದೆಲ್ಲಾ ಇಲಿಗಳೇ ಆಗಿದ್ದಿತು.

oo oo

**ಇಲಿಗಳ ಆಶ್ರಯ ಪಡೆದದ್ದು.**

ಸರಿಯೆ, ಈ ಇಲಿಗಳನ್ನೇ ತನ್ನ ಚಿತ್ರಗಳಿಗೆ ಏಕೆ ಮುಖ್ಯ ಪಾತ್ರವಾಗಿ ಸ್ವೀಕರಿಸಬಾರದೆಂಬ ಭಾವವು ಡಿಸ್ನೀಗೆ ಉಂಟಾಯಿತು. ಕನ್ಸಾಸ್ ನಗರದಲ್ಲಿದ್ದ ತನ್ನ ಕಾರ್ಯಾಲಯದಲ್ಲಿ ಕುಳಿತು ಕೆಲಸ ಮಾಡುತ್ತಿರುವಾಗಲೆಲ್ಲಾ ಇವನ ಬಳಿಗೆ ಇಲಿಗಳು ಓಡಾಡಿಕೊಂಡು ಬರುತ್ತಾ ತಿಂಡಿಯೇನಾದರೂ ಸಿಕ್ಕವುದೆ ಎಂದು ಸಂಚರಿಸುತ್ತಾ ಇದ್ದವು. ಡಿಸ್ನಿಯು ಇಲಿಗಳಲ್ಲಿ ಕೆಲವನ್ನು ಹಿಡಿದುಕೊಂಡು ಡೆಸ್ಕಿನ ಮೇಲೆ ಪಂಜರದಲ್ಲಿ ಬಂಧಿಸಿಟ್ಟನು. ಅವುಗಳಲ್ಲಿ ಒಂದು ಇಲಿಯು ಬಹು ಚುರುಕಾಗಿದ್ದಿತು. ಇವನು ಕೆಲಸ ಮಾಡುತ್ತಿರುವಾಗ್ಗೆ ಸ್ವೇಚ್ಛೆಯಿಂದ ಅಲ್ಲಿಂದಿಲ್ಲಿಗೆ ನಿರ್ಭಯವಾಗಿ ಓಡಾಡುತ್ತಿತ್ತು. ಡಿಸ್ನಿಯು ಆ ಇಲಿಗೆ ಒಂದು ಪ್ರೀತಿಯ ಹೆಸರನ್ನು ಇಟ್ಟನು. ಅದೇ 'ಮಿಕ್ಕಿಮೌಸ್' (Micci Mouse)

oo oo

**ಮೊಟ್ಟಮೊದಲನೆಯ ಮಿಕ್ಕಿಮೌಸ್ ಚಿತ್ರವು.**

ಸರಿ, ಈ ಇಲಿಗಳನ್ನು ಇಟ್ಟುಕೊಂಡು ಇನ್ನುಮೇಲೆ ಚಿತ್ರಗಳನ್ನು ತೆಗೆಯಲು ವಾಲ್ಟರ್ ಡಿಸ್ನೀಯು ನಿಶ್ಚೈಸಿಕೊಂಡನು. ಆದರಂತೆಯೇ ಮೊಟ್ಟಮೊದಲು ತನ್ನ ಮನೆಯಲ್ಲಿಯೇ ಒಂದು ಚಲನಚಿತ್ರವನ್ನು ತಯಾರಿಸಿದನು. ಇದು ಸಿದ್ಧಪಡಿಸಲ್ಪಡುವ ವರೆಗೂ ಈ ವಿಚಾರವನ್ನು ಎಲ್ಲಿಯೂ ಹೊರಪಡಿಸಲಿಲ್ಲ. ಕೊನೆಗೆ ತಯಾರಿಯು ಮುಗಿಯುತ್ತಲೇ ಅದನ್ನು ತೆಗೆದುಕೊಂಡು ಮಾರಲು ಪ್ರಯತ್ನಿಸಿದನು. ಆದರೆ ಎಷ್ಟು ಕಂಪೆನಿಗಳಿಗೆ ಹೋಗಿ ತಿರುಗಿದರೂ ಒಬ್ಬನೂ ಅದನ್ನು ಕೊಳ್ಳಲು ಒಪ್ಪಲಿಲ್ಲ.

oo oo

**ಅಭೂತಪೂರ್ವವಾದ ಜಯಭೇರಿ.**

ಅಷ್ಟುಮಾತ್ರಕ್ಕೆ ಡಿಸ್ನೀಯು ಆಶಾಭಂಗ ಪಡಲಿಲ್ಲ. ಮತ್ತೆರಡು 'ಮಿಕ್ಕಿಮೌಸ್' ಚಿತ್ರಗಳನ್ನುತಯಾರಿಸಿದನು. ಮೂರನೆಯ ಚಿತ್ರವು ೧೯೨೮ನೆಯ ಇಸ್ವಿಯ ಗ್ರೀಷ್ಮ ಋತುವಿಗೆ ಮುಗಿಯಿತು. ಈ ಚಿತ್ರದ ಹೆಸರು 'ಸ್ಟೀಂಬೋಟ್ ವಿಲ್ಲೀ' ಅದೇ ಸೆಪ್ಟಂಬರು ತಿಂಗಳಲ್ಲಿ ಈ ಚಿತ್ರವು ಒಂದಾನೊಂದು ನ್ಯೂಯಾರ್ಕ್ ನಗರದ ರಂಗಮಂದಿರದಲ್ಲಿ ಪ್ರದರ್ಶಿಸಲ್ಪಟ್ಟಿತು. ಪ್ರೇಕ್ಷಕರೆಲ್ಲರೂ ಹೊಟ್ಟೆಯುಬ್ಬಿ ಹರಿದಾಡುವಂತೆ ನಕ್ಕು ಆನಂದಪಟ್ಟರು.

'ಮಿಕ್ಕಿಮೌಸ್' ಚಿತ್ರಗಳ ಮೇಲೆ ಗಾಢವಾದ ಅಭಿಮಾನ ವುಂಟಾಯಿತು. ಅದು ಮೊದಲು ಈ ಚಿತ್ರಗಳನ್ನು ಪ್ರದರ್ಶಿಸಲು ಪ್ರತಿಯೊಂದು ನಾಟಕ ಮಂದಿರದವರೂ ಪ್ರಯತ್ನ ಮಾಡುವವರಾದರು. ಕ್ರಮೇಣ ಮಿಕ್ಕಿಮೌಸ್ ಅಭಿಮಾನವು ಹೆಚ್ಚುತ್ತಾ ಬಂದಿತು. ನೂರಾರು ಗಿರಾಕಿಗಳು ವಾಲ್ಟ್ ಡಿಸ್ನೀಗೆ ಬಂದವು. ಸಾವಿರಾರು ಪತ್ರಗಳು ಕೆಲವು ಡಿಸ್ನೀಯ ಹೆಸರಿನಲ್ಲಿ, ಬಹುಮಟ್ಟಿಗೆ 'ಮಿಕ್ಕಿಮೌಸ್, ಹಾಲೀವುಡ್, ಕಾಲಿಫೋರ್ನಿಯಾ' ಎಂಬ ವಿಳಾಸಕ್ಕೆ ಬರುವವುಗಳೇ ಹೆಚ್ಚಾದವು.

oo oo

**ಸ್ಟೂಡಿಯೋ ವೈಭವವು.**

ಈಗ ವಾಲ್ಟ್ ಡಿಸ್ನಿಯು ತನ್ನ ಮಿಕ್ಕಿಮೌಸ್ ಚಿತ್ರಗಳನ್ನು ಮನೆಯಲ್ಲಿ ತೆಗೆಯುತ್ತಲಿಲ್ಲ. ಒಂದು ದೊಡ್ಡ ಸ್ಟೂಡಿಯೊ (ಚಲನ ಚಿತ್ರ ತಯಾರಿಯ ನಾಟಕಶಾಲೆ) ಯನ್ನು ಆಧುನಿಕ ಪರಿಕರಗಳ ಸಜ್ಜುಕೆಯಿಂದ ಕಟ್ಟಿಸಿದ್ದಾನೆ. ಸುಮಾರು ೭೦೦ ಮಂದಿ ಕೆಲಸಗಾರರು ಈ ಸ್ಟುಡಿಯೋದಲ್ಲಿ ಕೆಲಸ ಮಾಡುತ್ತಿರುವರು. ಇವರಲ್ಲಿ ೧೭೫ ಮಂದಿ ಕಲಾಕೋವಿದರೇ ಇರುವರು. ವ್ಯಂಗ್ಯತ್ವವನ್ನು ಬಲ್ಲವರೂ, ಫೋಟೋಗ್ರಾಫರುಗಳೂ, ರಿಕಾರ್ಡಿಸ್ಟರೂ, ಚಿತ್ರಗಾರರೂ, ಇತರ ನೌಕರರೂ ಇರುವರು. ಈ ಸ್ಟುಡಿಯೋದಲ್ಲಿ ಈ ಶಿಬ್ಬಂದಿಯೊಂದಿಗೆ ವಾಲ್ಟ್ ಡಿಸ್ನಿಯು ಈಗ

೩೯ನೇ ಪುಟ ನೋಡಿರಿ.

# ಎಚ್ಚೆತ್ತು ನಿಂತಿರುವ ಸಂಸ್ಥಾನಗಳ ಪ್ರಜಾ ಕೋಟಿಯು ಚಳವಳ ಕಾರ್ಯಾರಂಭ !



ತಿರುವಾಂಕೂರು ಮಹಾರಾಜರು.

## ನಿರಂಕುಶ ಅನಾಡಳಿತೆಯ ಪ್ರಲಯ ತಾಂಡವ ನೃತ್ಯ

"ದಿನಂಪ್ರತಿ ಪರಿವರ್ತನವಾಗುತ್ತಿರುವ ಆಧುನಿಕ ಭಾರತ ವರ್ಷದಲ್ಲಿ ದೇಶೀಯ ಸಂಸ್ಥಾನಗಳು ಕಾಲಗುಣ ವಿರುದ್ಧವಾದ ಪ್ರಮೋದ ವಸ್ತುಗಳು".

●

### ಹೈದರಾಬಾದಿನ ಅಶಾಂತಿ.

ಭಾರತೀಯ ಸಂಸ್ಥಾನಗಳಲ್ಲಿ ತಲೆದೋರಿರುವ ಸ್ವಾತಂತ್ರ್ಯ ಸಂಗ್ರಾಮದ ಬಿರುಗಾಳಿಯು ಹೈದರಾಬಾದ್ ಸಂಸ್ಥಾನದಲ್ಲಿಯೂ ಸುಳಿಯಲಾರಂಭಿಸಿದೆ. ನೂರಾರು ಮಂದಿ ಸಾಮ್ರಾಜ್ಯಶಾಹಿಯ ಸೆಳೆತಕ್ಕೆ ಸಿಲುಕಿ ಸೆರೆಮನೆಯನ್ನು ಸೇರುತ್ತಿದ್ದಾರೆ. ಅಲ್ಲಿಯ ಪ್ರಜೆಗಳಲ್ಲಿ ಪ್ರಚಂಡ ಅಶಾಂತಿಯಿದೆಯೆಂಬುದರಲ್ಲಿ ನಿರ್ವಿವಾದ. ಈ ವಾರ್ತೆಯು ಭಾರತದ ಹೊರಗಿನ ಪತ್ರಿಕೆಗಳಲ್ಲಿ ಪ್ರಕಟವಾಗುವುದಿಲ್ಲ. ಕಾರಣ-ಆಳರಸರು ವೃತ್ತ ಪತ್ರಿಕಾ ಸಂಸ್ಥೆಗಳಿಗೆ ಧಾರಾಳವಾಗಿ ಲಂಚ ಕೊಟ್ಟಿದ್ದಾರೆಂದು ಡಾ. ಜಯಸೂರ್ಯ ನಾಯ್ಡುರವರು ಬರೆಯುತ್ತಾರೆ.

### ಅಶಾಂತಿಗೆ ಕಾರಣ?

ಸಮಗ್ರ ಭಾರತದ ಸಂಸ್ಥಾನಗಳ ಪೈಕಿ ಹೈದರಾಬಾದು ಅತ್ಯಂತ ದೊಡ್ಡದಾದರೂ ಅಲ್ಲಿಯ ರಾಜಕೀಯ ಮತ್ತು ಆರ್ಥಿಕ ಪರಿಸ್ಥಿತಿಯು ಬಹಳ ಹೀನವಾಗಿದೆ. ಅಲ್ಲಿಯ ಜನಸಂಖ್ಯೆಯನ್ನು ನೋಡಿದರೆ ೧೦೦ರಲ್ಲಿ ೧೧ ಮಂದಿ ಮುಸಲ್ಮಾನರು ೮೯ ಮಂದಿ ಹಿಂದುಗಳು. ಆದರೆ ಹೆಚ್ಚಿನ ಅಧಿಕಾರಗಳು ಮುಸಲ್ಮಾನರಾಧೀನವಿವೆ. ಪ್ರಾಗತಿಕ ಅಭಿಪ್ರಾಯವಿಲ್ಲದ ಈ ಸರಕಾರದ ರೀತಿ ನೀತಿಗಳು ಎಲ್ಲಾ ಪ್ರಜೆಗಳನ್ನು ಒಂದೇ ರೀತಿಯಲ್ಲಿ ಕಾಣುವುದಿಲ್ಲ.

### ರೆಸಿಡೆಂಟರ ಆಳ್ವಿಕೆ!

ಹೈದರಾಬಾದಿನ ಉಚ್ಚಾಧಿಕಾರಿಗಳಲ್ಲಿ ಜನರಿಗೆ ವಿಶ್ವಾಸವಿಲ್ಲ. ಹೈದರಾಬಾದಿನ ಈಗಿನ ಮಂತ್ರಿಮಂಡಲದಲ್ಲಿ ಹೆಚ್ಚಿನವರು ಹೊರಗಿನವರು. ಈ ಮಂತ್ರಿಮಂಡಲವು ನಿಜಾಮರಿಂದ ಎಲ್ಲಾ ಹಕ್ಕುಗಳನ್ನೂ ಸೆಳೆದೊಯ್ದಿದೆಯೆಂದು ಅಲ್ಲಿಯ ಪ್ರಜೆಗಳಭಿಮತ. ಈ ಮಂತ್ರಿಮಂಡಲದ ಹಿಂದೆ ಬ್ರಿಟಿಷ್ ಸರಕಾರವು ಪ್ರತ್ಯಕ್ಷವಾಗಿ ತನ್ನ ಪ್ರಭಾವವನ್ನು ತೋರಿಸುತ್ತಿದೆಯೆಂದು ಹೇಳಲಾಗಿದೆ. ಸ್ಪಷ್ಟವಾಗಿ ಹೇಳುವುದಿದ್ದರೆ ಮಂತ್ರಿಗಳು ರೆಸಿಡೆಂಟರಂತೆ ಕುಣಿಯುತ್ತಾರೆ. ಈ ಅಭಿಪ್ರಾಯವು ಹಿಂದೂ-ಮುಸಲ್ಮಾನರೆನ್ನದೆ ಪ್ರತಿಯೊಬ್ಬಗಲ್ಲಿಯೂ ಬೇರೂರಿದೆ.

### ಸಾಮ್ರಾಜ್ಯಶಾಹಿಯ ಕೈಗೂಸು!

ಹೈದರಾಬಾದಿನ ಈಗಿನ ಪ್ರಧಾನ ಮಂತ್ರಿಗಳಾದ ಸರ್ ಅಕ್ಬರ್ ಹೈದರಿಯವರು ಬ್ರಿಟಿಷ್ ಸರಕಾರದ ಕೈಗೂಸೆಂದೂ, ನಿಜಾಮರು ತನ್ನ ವಿಶ್ವಸನೀಯ ಮಂತ್ರಿಯಾಗಿದ್ದ ಮಹಾರಾಜಾ ಕಿಷೆನ್ ಪ್ರಸಾದರನ್ನು ತೆಗೆದು ಹಾಕುವಂತೆ

ಬ್ರಿಟಿಷ್ ಸರಕಾರವು ಒತ್ತಾಯ ಪಡಿಸಿತೆಂದೂ ಜನರ ಅಂಬೋಣ ವಾಗಿದೆ. ಮಿ ಹೈದರಿಯವರು ಈಗಿನ ಹೈದರಾಬಾದಿನ ಸರ್ವಾಧಿಕಾರಿ! ಅವರು ಬ್ರಿಟಿಷರ ಫೆಡರೇಶನ್ನೇ ಮೊದಲಾದ ಹಾನಿಕಾರಕ ಯೋಜನೆಗಳಿಗಾಗಿ ದುಡಿಯುವ ವರು-ಹೊರಗಿನವರ ಕಣ್ಣಿಗೆ ಮಣ್ಣೆರಚಲು ಹೈದರಿಯವರು 'ರಾಯಿಟರ್' ಮತ್ತು 'ಟೈಮ್ಸ್ ಆಫ್ ಇಂಡಿಯಾ' ಮೊದಲಾದ ವೃತ್ತಾಂತ ಸಂಸ್ಥೆಗಳಿಗೆ ಧಾರಾಳ ಲಂಚವಿತ್ತಿದ್ದಾರೆ-ಸ್ಥಳೀಯ ಪತ್ರಿಕೆ ಗಳು ಸತ್ಯವಾದುದನ್ನು ಪ್ರಕಟಿಸ ದಂತೆ ಕಠಿನ ಕಾಯಿದೆಗಳನ್ನು ಜಾರಿಗೆ ತಂದಿದ್ದಾರೆ. ಇವೇ ಮೊದ ಲಾದ ಕಾರಣಗಳಿಂದಾಗಿ ಈಗಿನ ಮಂತ್ರಿಮಂಡಲವನ್ನು ಪ್ರಜಾ ಕೋಟಿಯು ನಂಬುವುದಿಲ್ಲ.

**ಜಾತೀಯತೆಯ ಬೆಂಕಿ!**

ಹಿಂದೂ-ಮುಸಲ್ಮಾನರು ಪರ ಸ್ಪರ ಐಕ್ಯವನ್ನು ಸ್ಥಾಪಿಸುವ ಯತ್ನವು ಒಂದೆಡೆಯಲ್ಲಿ ನಡೆ ಯುತ್ತಿರುವಾಗ ಇನ್ನೊಂದೆಡೆಯಲ್ಲಿ ಜಾತೀಯತೆಯ ಬೆಂಕಿಯನ್ನು ದಾವಾನಲದಂತೆ ಹಬ್ಬಿಸುವ ಯತ್ನ ಗಳು ಬಲವಾಗಿ ನಡೆಯುತ್ತಿವೆ. ಹಿಂದೂ ಮುಸಲ್ಮಾನರೊಳಗೆ ಕಲಹವು ಸದಾ ನಡೆಯುತ್ತಿರ ಬೇಕೆಂಬ ದೃಷ್ಟಿಯಿಂದ ಬಹುವಾಗಿ ದುಡಿಯುತ್ತಿರುವ ವಿದೇಶೀ ಶಕ್ತಿಯ ಚಟುವಟಿಕೆಗಳು ಇದರ ಹಿಂದಿವೆಯೆಂಬುದರಲ್ಲಿ ಎರಡ ಭಿಪ್ರಾಯವಿರಲಾರದು.

**ನಿಜಾಮ್-ನಾಮಮಾತ್ರ ದೊರೆ!**

ಹೈದರಾಬಾದಿನ ನಿಜಾಮರು ಹಿಂದೂ-ಮುಸಲ್ಮಾನರ ಪ್ರೀತಿ ಯನ್ನು ಏಕಪ್ರಕಾರವಾಗಿ ಗಳಿಸಿರು ವುದರಿಂದಲೂ ಅವರ ಎಲ್ಲಾ ಅಧಿ ಕಾರಗಳನ್ನು ಈಗಿನ ಮಂತ್ರಿ ಮಂಡಲವು ಸೆಳೆದುಕೊಂಡಿದೆಯೆಂದು ಹೈದರಾಬಾದಿನ ಪ್ರಜೆಗಳಭಿಮತ. ಜವಾಬ್ದಾರೀ ಸರಕಾರವನ್ನು ತನ್ನ ಪ್ರಜೆಗಳಿಗೆ ಕೊಡಬೇಕೆಂಬ ಮಹ



ತಿರುವಾಂಕೂರಿನ ದಿವಾನ್
ಸಿ. ಪಿ. ರಾಮಸ್ವಾಮಿ ಐಯ್ಯರ್

ದಭಿಲಾಷೆಯು ನಿಜಾಮರಿಗಿದ್ದರೂ ಬ್ರಿಟಿಷ್ ಸಾಮ್ರಾಜ್ಯಶಾಹಿಯ ಕೈಗೂಸಾದ ಸರ್ ಅಕ್ಬರ್ ಹೈದರಿ ಯವರು ಇದಕ್ಕೆ ವಿರೋಧವಾಗಿ ದ್ದಾರೆಂಬ ಅಭಿಪ್ರಾಯವು ಬಲ ವಾಗಿ ಹಬ್ಬಿಕೊಂಡಿದೆ.

**ಫೆಡರೇಶನಿಗೆ ಸಮ್ಮತಿ.**

ಬರುವ ಎಪ್ರಿಲಿನಲ್ಲಿ, ಸಮಗ್ರ ಭಾರತವು ಏಕಕಂಠದಿಂದ ತಿರಸ್ಕರಿಸಿ ರುವ ಫೆಡರಲ್ ಯೋಜನೆಯು ಬರ ಲಿದೆ. ಅದಕ್ಕೆ 'ಸೈ' ಗುಟ್ಟುವ ಕಾಲವನ್ನು ಹೈದರಬಾದಿನ ಈಗಿನ ಮಂತ್ರಿಮಂಡಲವು ನಿರೀಕ್ಷಿಸುತ್ತಿದೆ.

**ಸಂಶಯದ ಬೀಜ!**

ಮೊದಲು ಹೈದರಾಬಾದಿನಲ್ಲಿ ಜಾತೀಯ ಸಮಸ್ಯೆಯು ಇದ್ದಿಲ್ಲ. ವಿದೇಶಿಯರು ತಮ್ಮ ಸ್ವಾರ್ಥ ಸಾಧನೆಗಾಗಿ ಇದರ ಹಾನಿಕಾರಕ ಬೀಜವನ್ನು ಬಿತ್ತಿದರು. ಅದೀಗ ಬೆಳೆದು ಮರವಾಗಿದೆ. ಜವಾಬ್ದಾರೀ ಸರಕಾರವನ್ನು ಜಾರಿಗೆ ತಂದರೆ ಶೇಕಡಾ ೮೫ರಷ್ಟಿರುವ ಹಿಂದುಗಳು ಬಹುಮತವನ್ನು ಪಡೆದು ತಮ ಹಿತ ಸಂಬಂಧಗಳಿಗೆ ಕೊಡಲಿಯಿಕ್ಕ ಬಹುದೆಂಬ ಸಂಶಯವನ್ನು ಮುಸ ಲ್ಮಾನರಲ್ಲಿ ಹುಟ್ಟಿಸಲಾಗಿದೆ. ಹಿಂದುಗಳು ತಮ್ಮ ಮುಸ್ಲಿಮ್ ಬಾಂಧವರಿಗೆ ಅಂತಹ ಅನ್ಯಾಯ ವನ್ನು ಮಾಡುವುದು ಅಸಾಧ್ಯ ವಾದರೂ ಅಧಿಕಾರೀವರ್ಗದ ಪ್ರಚಾರದಿಂದಾಗಿ ಹೈದರಾಬಾದಿನ ಇಂದಿನ ಪರಿಸ್ಥಿತಿಯು ಶೋಚ ನೀಯವಾಗಿದೆ. ನಿಜಸ್ಥಿತಿಯನ್ನರಿ ಯದ ಎರಡೂ ಧರ್ಮಗಳ ಕಿಡಿ ಗೇಡಿಗಳು ಹೊಡೆದಾಟಕ್ಕೆ ಪ್ರಾರಂಭಿಸಿದರೆ, ಹೈದರಾಬಾದು ಫೆಡರೇಶನಿಗೆ ಸೇರಲು ದೊಡ್ಡ ದೊಂದು ಕಾರಣವಾಗುವುದು. ಸಾಮ್ರಾಜ್ಯಶಾಹಿಯ ಕುಹಕತನವು ಎಷ್ಟೊಂದು ಹೀನವಾಗಿದೆಯೆಂಬು ದಕ್ಕೆ ಇದಕ್ಕಿಂತ ದೊಡ್ಡ ನಿದರ್ಶನ ಬೇರೆ ಬೇಕೆ?

**ಕಾಲ್ಸಾ ಸಂಸ್ಥಾನದಲ್ಲಿ ನಗ್ನ ಮುಷ್ಕರ.**

ಕಾಲ್ಸಾ ಸಂಸ್ಥಾನದ ರೈತರು ಕಳೆದ ಸಪ್ಟಂಬರ ತಿಂಗಳಿನಿಂದ ಏಕಸತ್ತಾಶಾಹಿಯೊಂದಿಗೆ ಧೀರ ತನದಿಂದ ಹೋರಾಡಲಾರಂಭಿ

ಸಿದ್ದಾರೆ. ಈಗಾಗಲೆ ಸುಮಾರು ೧೫೦ ಮಂದಿ ಸೆರೆಮನೆಯನ್ನು ಸೇರಿದ್ದಾರೆ. ಕಾಲ್ಸಾ ಸಂಸ್ಥಾನದ ರಾಜಧಾನಿಯಾದ ಛಾಚ್ರೋಲಿಯದ ಭಯಾನಕ ಸೆರೆಮನೆಯಲ್ಲಿ, ಸಾಕಷ್ಟು ಬಟ್ಟೆಬರೆಗಳಿಲ್ಲದೆ ಈ ಛಳಿಗಾಲದಲ್ಲಿ ಅವರು ಬಳಲುತ್ತಿದ್ದಾರೆ. ಸೆರೆಮನೆಯ ಪರಿಸ್ಥಿತಿಯನ್ನು ಸುಧಾರಿಸಲು ಮಾಡಿದ ಬೇಡಿಕೆಗಳೆಲ್ಲವೂ ನಿಷ್ಫಲವಾಗಿ ಅವರು ತಮ್ಮ ಬಟ್ಟೆಗಳನ್ನು ಕಿತ್ತೊಗೆದು ನಗ್ನ ಮುಷ್ಕರವನ್ನು ಪ್ರಾರಂಭಿಸಿದ್ದಾರೆ. ಈ ಅಮಾನುಷೀ ಪರಿಸ್ಥಿತಿಯನ್ನು ಹೋಗಲಾಡಿಸುವುದಕ್ಕಾಗಿ ಈಗಾಗಲೆ ಚಳವಳವು ತಲೆದೋರಿದೆ.

### ಪಾಟಿಯಾಲದ ಮಧ್ಯಕಾಲೀನ ಪರಿಸ್ಥಿತಿ.

ಪಾಟಿಯಾಲದ ತರುಣ ಮಹಾರಾಜರು ತಮ್ಮ ಜಾಹೀರುನಾಮೆಯಲ್ಲಿ ಪ್ರಜೆಗಳ ಪರಿಸ್ಥಿತಿಯನ್ನು ಸುಧಾರಿಸುವೆನೆಂದು ಹೇಳಿರುವುದಿದ್ದರೂ, ಆ ಸಂಸ್ಥಾನದಲ್ಲಿ ಮಧ್ಯಕಾಲೀನ ಪರಿಸ್ಥಿತಿಯುಂಟಾಗಿದೆ. ಸಂಸ್ಥಾನದ ಅಧಿಕಾರೀ ವರ್ಗದವರ ವರ್ತನೆಯ ಕುರಿತು ತೀವ್ರ ಅಸಮ್ಮತಿಯನ್ನು ಪ್ರಜೆಗಳು ವ್ಯಕ್ತಪಡಿಸಿದ್ದಾರೆ. ಮಹಾರಾಜರು ಪ್ರಚಂಡ ಅಶಾಂತಿಯನ್ನು ಕಂಡು ತನ್ನ ಸಂಸ್ಥಾನದಲ್ಲಿ ಸಂಚರಿಸಿದಾಗ, ಪ್ರಜೆಗಳು ಹಿಂಜರಿಯದೆ ತಮ್ಮ ಕೇಳಿಕೆಗಳನ್ನು ಅವರ ಮುಂದಿಟ್ಟಿದ್ದಾರೆ. ಭೂಕಂದಾಯ, “ಬೇಗಾರ್” ಮೊದಲಾದುವುಗಳು ಇನ್ನೂ ಸಹಿಸಲಾರದ ಅವಸ್ಥೆಯಲ್ಲಿವೆ. ಪ್ರಜೆಗಳು ಜವಾಬ್ದಾರೀ ಸರಕಾರಕ್ಕಾಗಿ ಸದ್ಯದಲ್ಲಿಯೇ ಚಳವಳ ಹೂಡುವುದರಲ್ಲಿದ್ದಾರೆ.

### ತಿರುವಾಂಕೂರಿನಲ್ಲಿ ವ್ಯವಸ್ಥಿತ ದಬ್ಬಾಳಿಕೆ.

ತಿರುವಾಂಕೂರು ಸಂಸ್ಥಾನದಲ್ಲಿ ಪರಿಸ್ಥಿತಿಯು ಇನ್ನೂ ಸುಧಾರಿಸಲಿಲ್ಲ. ಸರಕಾರವು ಕಾಂಗ್ರೆಸ್ ಚಳವಳದ ಬೆನ್ನೆಲುಬನ್ನೇ ಮುರಿಯಲು ಶತಪ್ರಯತ್ನಗಳನ್ನು ಮಾಡುತ್ತಿದೆ. ದಸ್ತಗಿರಿ, ವೃತ್ತಪತ್ರಿಕಾ ಬಹಿಷ್ಕಾರ, ಇವೇ ಮೊದಲಾದ ದಬ್ಬಾಳಿಕೆಗಳು ನಡೆಯುತ್ತಿವೆ. ಜವಾಬ್ದಾರೀ ಸರಕಾರವನ್ನು ಬೇಗನೆ ಕೊಡದಿದ್ದರೆ ಮಹತ್ತರವಾದ ಪ್ರಚಂಡ ಸತ್ಯಾಗ್ರಹ ಮಾಡುವೆವೆಂದು ಸಂಸ್ಥಾನ ಕಾಂಗ್ರೆನವರು ಎಚ್ಚರಿಸಿದ್ದಾರೆ.

### ಮೈಸೂರಲ್ಲೇನಾಗುತ್ತಿದೆ?

ಸರ್ ವೇಪರಮೇಶಮ್‌ರವರ ವಿದುರಾಶ್ವತ್ಥ ವಿಚಾರಣಾ ವರದಿಯು ಬೆಳಕಿಗೆ ಬಂದ ಬಳಿಕ ಮೈಸೂರು ಕಾಂಗ್ರೆಸ್ ಚಳವಳದ ಗಡಿಯಾರವು ನಿಂತಿರುವಂತೆ ಕಾಣುತ್ತಿದೆ. ಸರ್ ವೇಪರಮೇಶಮ್‌ರವರ ವರದಿಯ ಕುರಿತು ಪ್ರಜೆಗಳು ಯಾವ ಅಭಿಪ್ರಾಯಪಟ್ಟಿದ್ದಾರೆಂಬುದಕ್ಕೆ ನವಂಬರ ೨೭ರಂದು ಸಂಸ್ಥಾನದ ವಿವಿಧ ಭಾಗಗಳಲ್ಲಿ ಆಚರಿಸಲ್ಪಟ್ಟ ಹರತಾಳವೇ ಸಾಕ್ಷಿ. ಚಳವಳವು ತಾತ್ಕಾಲಿಕ ವಿಶ್ರಾಂತಿಯನ್ನು ಪಡೆದಿದ್ದರೂ ಜವಾಬ್ದಾರೀ ಸರಕಾರವನ್ನು ಪಡೆಯುವ ಯತ್ನಗಳು ನಡೆಯುತ್ತಲೇ ಇವೆ.




### ಢೆಂಕನಲ್ ಸಂಸ್ಥಾನದ ಅಮಾನುಷೀ ಆಳ್ವಿಕೆ.

ಒರಿಸ್ಸದ ಸಮೀಪದಲ್ಲಿರುವ ೧೪೬೩ ಚದರ ಮೈಲು ವಿಸ್ತೀರ್ಣದ, ೨,೮೪,೩೨೬ ಜನ ಸಂಖ್ಯೆಯುಳ್ಳ ಈ ಸಂಸ್ಥಾನದಲ್ಲಿ ನಡೆಯುತ್ತಿರುವ ಅಮಾನುಷೀ ಅತ್ಯಾಚಾರವನ್ನು ಕಂಡರೆ ಎಂಥವರೂ ಕಣ್ಣೀರು ಸುರಿಸಬೇಕು. ನೆಲದ ಮೇಲೆ ಮಲಗಿಸಿ ಬಡಜನರನ್ನು ಬೂಟೂಸುಗಳಿಂದ ಒದೆಯುವುದು, ಮನೆಗಳ ಬೀಗಮುರಿದು ಸಂಪತ್ತಿನ ಲೂಟಿಮಾಡುವುದು, ದನಕರುಗಳನ್ನು ಗುಂಪುಗುಂಪಾಗಿ ಗೊತ್ತಿಲ್ಲದ ಜಾಗಕ್ಕೆ ಅಟ್ಟಿಬಿಡುವುದು, ಬಡಹೆಂಗಸರ ಬಟ್ಟೆ ಬಿಚ್ಚಿಸಿ ಪೋಲೀಸರು ತಮ್ಮ ಕಾಮದ ಕೊಡವನ್ನು ತುಂಬುವುದು, ಮನೆಗಳಿಗೆ ಬೆಂಕಿಕೊಡುವುದು, ಇವೆಲ್ಲವನ್ನೂ ನೋಡುವಾಗ ಭೀಕರ ಯುದ್ಧ ನಡೆಯುತ್ತಿರುವ ಪ್ರಾಂತ್ಯದಲ್ಲಿ ಕೂಡಾ ಇಂತಹ ಅತ್ಯಾಚಾರವು ನಡೆಯಲಾರದು ಎಂದೆನಿಸುತ್ತದೆ. ಸಂಸ್ಥಾನವನ್ನು ಇರಗೊಡಿಸಿದರೆ ಪರಿಸ್ಥಿತಿಯು ಹೇಗಾಗಬಹುದೆಂದು ಹೇಳಬೇಕಾಗಿಲ್ಲ. ಕಾಂಗ್ರೆಸು ಇಂಥ ಅನ್ಯಾಯವನ್ನು ಕಂಡೂ ತನ್ನ ತಾಟಸ್ಥ್ಯ ಧೋರಣೆಯನ್ನು ಬದಲಾಯಿಸಲಾರದೆ?

(೧೪ನೆ ಪುಟ ನೋಡಿ)

## ✤ ನಿಮ್ಮನ್ನು ಹೆದರಿಸುವ ಆ ಜೈಲು! ✤



# ಎಲ್ಲಾ ವಹಿವಾಟುಗಳಿರುವ ವೆಲ್ಲೂರು ಜೈಲು!

ಡಕಾಯಿತಿನ ತಕ್ಷೀರಿಗೊಳಗಾಗಿ ಏಳು ವರ್ಷ ಕಠಿನ ಶಿಕ್ಷೆ ಪಡೆದು ಮದ್ರಾಸ್ ಪ್ರಾಂತ್ಯದ ಬೇರೆ ಬೇರೆ ಜೈಲುಗಳಲ್ಲಿದ್ದು ಬಂದವರೊಬ್ಬರ ಆತ್ಮಕಥೆಯಿದು.

### ಇಡ್ಲಿ ತರಿಸಿಯೇ ಬಿಟ್ಟೆ!

ಹೌದು. ನನ್ನ ಕೈಯಲ್ಲಿ ಬೊಕ್ಕೆಯ ಜ್ವಾಲೆ, ಹೊಟ್ಟೆಯಲ್ಲಿ ಹಸಿವೆಯ ಜ್ವಾಲೆಯಿರುವಾಗಲೇ ಮಧ್ಯಾಹ್ನದ ಹೊತ್ತಿಗೆ, ಬಟ್ಟಲಿಗೊಂದು ರಾಗಿಯ ಮುದ್ದೆ ಬಿತ್ತು. ನನಗೆ ಹೇಗದು ರಾಗಿಯ ಮುದ್ದೆ? ನನ್ನ ಬಿಲ್ಲೆಯಲ್ಲಿ 'ರೈಸ್' (ಅನ್ನ) ಎಂದು ಸ್ಪಷ್ಟವಾಗಿ ಬರೆದಿದೆಯಲ್ಲ? ನನ್ನ ಎದೆಯಲ್ಲೇನೋ ಕಾವು ಹುಟ್ಟಿ ಸುಡುತ್ತಿದೆ ನಿಜ. ಆದರೆ ಅದಕ್ಕೆ ಜೈಲಿನವರು ರಾಗಿಮುದ್ದೆಯುಣ್ಣಿಸಿ ತಂಪು ಮಾಡುವದು ಬೇಡ! ಇದನ್ನೊಮ್ಮೆ ನುಂಗಿದೆನೆಂದರಾಯಿತು- ಮತ್ತೆ ಹೊರ ಹೋಗುವ ವರೆಗೂ ರಾಗೀಮುದ್ದೆಯೇ ಗತಿಯಾದೀತೆಂದು ಭಾವಿಸಿ, ಅದನ್ನು ಮುಟ್ಟದೆ ಹಾಗೆಯೇ ಕುಳಿತುಬಿಟ್ಟೆ. ನಾನು ಉಣ್ಣದಿದ್ದರೆ ನನ್ನ ಹೊಟ್ಟೆ ಕೂಗಬೇಕು ಹೊರತು, ಬಂದು ನನ್ನನ್ನು ಸಮಜಾಯಿಸಲು ಅಲ್ಲಿಯಾರಿದ್ದಾರೆ- ಪತ್ನಿಯೊ, ತಾಯಿಯೊ? ಅಂದು ಮಧ್ಯಾಹ್ನ ನನಗೇನೂ ಇಲ್ಲವೆಂದಾಯಿತು. ಆದರೆ ರಾಗಿಯ ಮುದ್ದೆಗೂ ಕಲ್ಲಿನ ತುಂಡಿಗೂ ಸಂಬಂಧವಿಲ್ಲ. ಕಲ್ಲೊಡೆಯುವದನ್ನು ಒಡೆಯಲೇ

### ಲೇಖಾಂಕ ೯.

ಬೇಕು. ಖಾಲಿ ಹೊಟ್ಟೆಯಿಂದ ಆ ಬಂಡೆಕಲ್ಲನ್ನು ಸೀಳುವಾಗ ಹೇಗಾದೀತೆಂದು ನೀವೇ ಊಹಿಸಿಕೊಳ್ಳಿ. ದೇವರಿರುವದು ನಿಜವಾದರೆ ಆ ಪೆಟ್ಟು ಹೋಗಿ ಜೈಲಧಿಕಾರಿಗಳ ಎದೆಗೆ ಬಡಿಯದಿರದು! ಈ ದೂರನ್ನು ವಾರ್ಡರನು ಅಧಿಕಾರಿಗಳ ಕಡೆಗೆ ಕೊಂಡುಹೋಗಿರಬೇಕು. ಸಂಜೆಯ ಊಟಕ್ಕೆ ಮೊದಲು ಡಿಪ್ಯುಟಿ ಜೈಲರರ ಸವಾರಿ ನಾನಿದ್ದಲ್ಲಿಗೆ ಬಂತು. ಬಂದವರೇ ನನ್ನ ಬಿಲ್ಲೆಯನ್ನೆತ್ತಿ ನೋಡಿ, ವಾರ್ಡರನ್ನು ಕರೆದು 'ಇವನಿಗೆ ಅನ್ನವನ್ನು ಕೊಡಿಸು' ಎಂದು ಹೇಳಿ ಹೊರಟು ಹೋದರು. ಸಾಯಂಕಾಲ ಬಟ್ಟಲಿಟ್ಟು ಕುಳಿತಾಗ ಒಂದು 'ಇಡ್ಲಿ' ಬಂದು ಬಿತ್ತು. ಅಗ್ನಿಕುಂಡದಂತಾಗಿದ್ದ ನನ್ನ ಹೊಟ್ಟೆಯು ಆ ಸಮಯದಲ್ಲಿ ಮಧ್ಯಾಹ್ನದ ಇಡ್ಲಿಯನ್ನೂ ಕರೆಯುತ್ತಿತ್ತು. ಆದರೆ ಅದು ಹೇಗಾದೀತು? ಕೈದಿಯ ಹೊಟ್ಟೆ ಮತ್ತು ಮನಸ್ಸು ಬೇಕು ಬೇಕಾದುದನ್ನು ಕರೆಯಬಹುದು; ಕೈದಿ ಕರೆದಂತೆ ಇಡ್ಲಿ ಬರುವದಾದರೆ ಅದು ಜೈಲೆಂದಾಗುವದು ಹೇಗೆ?

### ಗುದ್ದಿನ ಗೇಟು ದಾಟಿದೆ!

ನಾನು ವೆಲ್ಲೂರು ಜೈಲಿನಲ್ಲಿಯೂ ಹನ್ನೊಂದು ದಿನ ಕ್ವರೆಂಟೈನಿನಲ್ಲಿರಬೇಕಾಯಿತು. ಹನ್ನೊಂದು ದಿನದ ಸೂತಕ ದಾಟಿದ ಮೇಲೆ ನನ್ನನ್ನು ಜೈಲಿನ ಒಳಗಿನ ಕೋಟೆಯೊಳಗೆ ಹೊಗಿಸುವ ಸಂಭ್ರಮ ನಡೆಯಿತು. ಈ ಜನ್ಮದಲ್ಲಿ, ನಾನು ನನ್ನ ಮದುವೆಯ ಚಪ್ಪರವನ್ನು ಪ್ರವೇಶಿಸಿದ ಆ ಸಂಭ್ರಮವನ್ನಾದರೂ ಮರೆಯಬಲ್ಲೆನು, ಅಂದಿನ ಗರ್ನಾಲನ್ನಾದರೂ ಮರೆಯಬಲ್ಲೆನು- ಕನಾನೂರಿನೊಳಗೆ ಪ್ರವೇಶಿಸಿದ ಆ ಸಂಭ್ರಮವನ್ನು, ಬೆನ್ನಸಂದಿಗೆ ತಪ್ಪದೆ ಬಿದ್ದ ಆ ಗರ್ನಾಲನ್ನು ಮರೆಯಲು ಹೇಗೆ ಸಾಧ್ಯವಾದೀತು? ಅಷ್ಟು ದಿನಗಳಿಂದ ಹುಳದಮುದ್ದೆ ತಿಂದು, ಎಲುಬು ಸವೆಯಹತ್ತಿದ ನನಗೆ ಮೆಯಿನ್ ಗೇಟಿನಲ್ಲಿ ಕಾದು ನಿಂತಿದ್ದ ಆ ಗುದ್ದನ್ನು ನೆನಸಿಕೊಂಡಾಗ ಮೈಯೆಲ್ಲಾ ಛಳಿ ಹಿಡಿಯಿತು. ಇಲ್ಲಿ ಈಗ ಆ ಗುದ್ದನ್ನು ತಪ್ಪಿಸಿಕೊಳ್ಳುವ ಬಗೆ ಹೇಗೆ? ನನಗೆ ಅನುಕೂಲ ದೊರೆಯುತ್ತಿದ್ದರೆ, ಅಂಗಿಯ ಒಳಗಡೆ ಬೆನ್ನಸಂದಿಗೊಂದು ಹರಿತ ಕತ್ತಿಯನ್ನು ಕಟ್ಟಿಕೊಂಡು ಹೋಗು

ತ್ತಿದ್ದೆ; ಒಬ್ಬ ವಾರ್ಡರನ ಕೈಯ್ಯಾದರೂ ಒಮ್ಮೆ ಸೀಳಿ ಹೋಗುತ್ತಿತ್ತಲ್ಲ! ಆದರೆ ಇದು ಮನಸ್ಸಿನ ಮಂಡಿಗೆಯಾಯಿತು. ಬೆನ್ನಲ್ಲಿ ಕತ್ತಿಯಿರುವದು ಹಾಗಿರಲಿ, ಮನಸ್ಸಿನಲ್ಲಿ ಈ ಕತ್ತರಿಯುಂಟೆಂದು ತಿಳಿದರೆ, ನನ್ನನ್ನಾಗಲೇ ಗುದ್ದಿ ಗುದ್ದಿ ಹಣ್ಣು ಮಾಡದೆ ವಾರ್ಡರರು ಬಿಟ್ಟಾರೆ? ಕರೆಯಲು ಬಂದ ವಾರ್ಡರನು 'ಹೂಂ' ಎಂದೊಡನೆ ಗಂಟು ಮೂಟೆ ಕಟ್ಟಿಕೊಂಡು ಅವನ ಬೆನ್ನು ಹಿಡಿಯಲೇ ಬೇಕು. ನಾನು ನನ್ನೊಳಗೇ 'ಗುದ್ದು ಗುದ್ದು ಗುದ್ದು' ಜಪಿಸುತ್ತಾ ಹೊರಟೆ. ಆ ಗುದ್ದಿನ ವರ್ಣನೆಯನ್ನು ಎಷ್ಟು ಬಾರಿ ಮಾಡಿ, ನಿಮ್ಮ ಬೆನ್ನಿಗಲ್ಲವಾದರೂ ಮನಸ್ಸಿಗೆ ನೋವನ್ನುಂಟು ಮಾಡಲಿ! ಅಂತೂ ಜೈಲಿನ ಮಹಾದ್ವಾರದಲ್ಲಿ ದೊಡ್ಡದೊಂದು ಗುದ್ದು ಇರುವದು ಎಷ್ಟೆಷ್ಟು ಬಾರಿಗೂ ಸತ್ಯ. ಮಂಗಳೂರು ಮೈದಾನಿನಲ್ಲಿ ಮಧ್ಯಾಹ್ನ ಹನ್ನೆರಡು ಘಂಟೆಗೆ ಗರ್ನಾಲು ಹೊಡೆಯುತ್ತಿದ್ದುದಾದರೂ ಸುಳ್ಳಾಗಿರಬಹುದು; ಸೆಂಟ್ರಲ್ ಜೈಲಿನ ಮೆಯಿನ್ ಗೇಟಿನೊಳಗೆ ಕಾಲಿಡುವಾಗ ಗರ್ನಾಲು ಹೊಡೆಯುವದಂತೂ ಖಂಡಿತ! ಆದರೆ ಇಲ್ಲಿ 'ಗುದ್ದು ಬಂತು' ಎನ್ನುವಾಗಲೇ ನಾನು ಬೆನ್ನನ್ನು ಫಕ್ಕನೇ ಓರೆ ಮಾಡಿಬಿಟ್ಟದ್ದರಿಂದ ಪೆಟ್ಟು ಅರ್ಧವಾಗಿ ಹೋಯಿತು. ಹೇಗೂ ಒಂದು ಜನ್ಮವನ್ನು ದಾಟಿದೆನೆಂಬಷ್ಟು ಸಂತೋಷದಿಂದ ನಾನು ವೆಲ್ಲೂರು ಜೈಲಿನೊಳಗೆ ಸೇರಿಕೊಂಡೆ. ಅಲ್ಲಿ ಡ್ರೆಸ್ಸು ಬದಲಾವಣೆ ಮೊದಲಾದ ಕ್ರಮಗಳೆಲ್ಲಾ ಜರಗಿದ ಮೇಲೆ ನನ್ನನ್ನು ೪ನೇ ನಂಬ್ರದ ಬ್ಲೋಕಿನೊಳಗೆ ಸೇರಿಸಿದರು.

**ವೆಲ್ಲೂರು ಮಹಾಕೋಟೆ!**

ವೆಲ್ಲೂರೆಂದರೆ ನನ್ನನ್ನು ನಾಲ್ಕೂವರೆ ವರುಷ ಪರ್ಯಂತ ಇರಿಸಿಕೊಂಡ ಜೈಲು. ನನ್ನ ಶಿಕ್ಷೆಯ ಬಹು ಭಾಗವನ್ನು ನಾನು ಕಳೆದುದು ಅಲ್ಲಿಯೇ. ನಿಮ್ಮ ಸ್ವಂತ ವಿಚಾರವನ್ನು ಹೇಳಿ. ನಾಲ್ಕೈದು ವರುಷಗಳಲ್ಲಿ ನೀವೆಷ್ಟು ಊರುಗಳನ್ನು ನೋಡುವದಿಲ್ಲ? ಎಂತೆಂತಹ ಆಟ ವಿನೋದಗಳನ್ನು ಕಾಣುವದಿಲ್ಲ? ಮತ್ತೆ ನಾನೇನು ಆ ಅವಧಿಯಲ್ಲಿ ಕುರುಡನಾಗಿರಲಿಲ್ಲವಷ್ಟೆ. ನಾನು ಆ ಕಾಲದಲ್ಲಿ ಸದಾ ಕಾಲ ಕಾಣುತ್ತಿದ್ದವುಗಳ ಪರಿಚಯವನ್ನು ನಿಮಗೆ ಚುಟುಕಿನಲ್ಲಾದರೂ ಮಾಡಿ ಕೊಡುವದು ಬೇಡವೆ? ಆದ್ದರಿಂದ ವೆಲ್ಲೂರು ಸೆಂಟ್ರಲ್ ಜೈಲು ಹೇಗಿತ್ತೆಂಬುದನ್ನು ಸ್ವಲ್ಪದರಲ್ಲಿ ಹೇಳುವೆನು, ಕೇಳಿ ಬಿಡಿ.

ವೆಲ್ಲೂರು ಜೈಲು, ವಿಸ್ತೀರ್ಣದಲ್ಲಿ ಕಡಿಮೆಯೆಂದರೆ ಕನಾನೂರು ಜೈಲಿನ ಒಂದೂವರೆ ಪಾಲಷ್ಟಿದೆ. ಕನಾನೂರಿನಲ್ಲಿ ಒಂದು ಸಾವಿರ ಜನರನ್ನು ತುಂಬಿಸುತ್ತಿದ್ದರಾದರೆ ಇಲ್ಲಿ ಭರ್ತಿ ೧೮೦೦ರ ವರೆಗೆ ಜಮೆಯಿಡುತ್ತಿದ್ದರು. ಕನ್ನಾನೂರಿನಂತೆಯೇ ಮಧ್ಯದಲ್ಲಿ ಟವರ್; ಆ ಟವರಿನ ಸುತ್ತಲೂ ನಂಬ್ರ ಒಂದರಿಂದ ಪ್ರಾರಂಭವಾಗಿ ಏಳರ ವರೆಗೆ ದೊಡ್ಡ ದೊಡ್ಡ ಬ್ಲೋಕುಗಳು. ಆ ಬ್ಲೋಕುಗಳ ಹಿಂಬದಿಯಲ್ಲಿ ಸುತ್ತಾಗಿ ಕಾಂಕ್ರೀಟು ಹಾಕಿದ ರಸ್ತೆ. ಆ ರಸ್ತೆಯ ಹೊರಬದಿಯಲ್ಲಿ ಅನುಕ್ರಮವಾಗಿ, ಕೆಲಸದ ಬ್ಲೋಕುಗಳು. ಕೆಲಸದ ಬ್ಲೋಕುಗಳಲ್ಲಿ ನಂಬ್ರ ೧ನೆಯದರಲ್ಲಿ ಬೂಟ್ಸಿನ ಕೆಲಸ, ೨ನೆಯದರಲ್ಲಿ ದರ್ಜಿ ಕೆಲಸ, ೩, ೪, ಮತ್ತು ೫ರಲ್ಲಿ ಮಗ್ಗ, ೬ನೇದರಲ್ಲಿ ಮಣ್ಣಿನ ಗಡಿಗೆ ತಯಾರಿ, ನಂಬ್ರ ೭ನೆಯದರಲ್ಲಿ ಬಡಗಿ ಕೆಲಸ, ಹೀಗೆ ಅನುಕ್ರಮವಾಗಿ ಇದೆ. ಪ್ರೆಸ್ಸು ಮೊದಲಾದ ಇತರ ಕಾರ್ಯಾಲಯಗಳು ಅಲ್ಲಲ್ಲಿವೆ. ಪೂರ್ವದಿಕ್ಕಿನಲ್ಲಿರುವ ಮಹಾದ್ವಾರ (ಮೆಯಿನ್‌ಗೇಟ್)ದ ಮೂಲಕ ಒಳಗೆ ಹೋಗುವಾಗ ಎಡಗಡೆಯಲ್ಲಿ ಮೊದಲನೆಯದಾಗಿ

(೪೭ನೆ ಪುಟ ನೋಡಿರಿ)

---

(೧೨ನೆ ಪುಟದಿಂದ)

**ರಾಜಕೋಟದಲ್ಲಿ-**

ಸರ್ ಪ್ಯಾಟ್ರಿಕ್ ಕ್ಯಾಡೆಲ್ ಇನ್ನೂ ತನ್ನ ಕಬ್ಬಿಣದ ಮುಷ್ಟಿಯನ್ನು ಸಡಲಿಸಲಿಲ್ಲ. ಚಳವಳವು ಏಕಪ್ರಕಾರವಾಗಿ ನಡೆಯುತ್ತಿದೆ. ದಸ್ತಗಿರಿಯಂತಹ ದಬ್ಬಾಳಿಕೆಗಳು ನಡೆಯುತ್ತಲೇ ಇವೆ. ಕಾಂಗ್ರೆಸ್-ಪ್ರಭುತ್ವಗಳೊಳಗೆ ಸಂಧಾನವು ತತ್ಕಾಲಕ್ಕೆ ನಡೆಯುವಂತಿಲ್ಲವೆಂದು ತೋರುತ್ತದೆ.

**ಕಾಲಗುಣ ವಿರುದ್ಧವಾದ ಪ್ರಮಾದ ವಸ್ತುಗಳು.**

ಇಂದಿನ ಸಂಸ್ಥಾನಗಳ ಕುರಿತು ಸಂಯುಕ್ತ ಪ್ರಾಂತ್ಯದ ಶ್ರೀ. ಆರ್. ಎಸ್. ಪಂಡಿತರು ಹೇಳಿರುವ ಮಾತುಗಳು ಬಹಳ ಸಮಂಜಸವಾಗಿವೆ.

"ದಿನಂಪ್ರತಿ ಪರಿವರ್ತನವಾಗುತ್ತಿರುವ ಆಧುನಿಕಭಾರತ ವರ್ಷದಲ್ಲಿ ದೇಶೀಯ ಸಂಸ್ಥಾನಗಳ, ಕಾಲಗುಣವಿರುದ್ಧವಾದ ಪ್ರಮಾದ ವಸ್ತುಗಳಂತೆ ಕಾಣುತ್ತವೆ."

# ಜಗತ್ತಿನ ಸಮಸ್ಯೆಯಂತಿರುವ ಸೋವಿಯೆಟ್ ರಷ್ಯ

## ನಿರುದ್ಯೋಗವಿಲ್ಲದ ಬೊಲ್ಶೆವಿಕ್ ರಾಷ್ಟ್ರದಲ್ಲಿ-ಜನತೆಯ ಪರಿಸ್ಥಿತಿ.

### ನವೀನ ಕ್ರಾಂತಿಕಾರಕ ಯೋಜನೆಯ ಹಂಚಿಕೆ.

ಸಮತಾವಾದದ ತವರೂರಾದ ಸೋವಿಯೆಟ್ ರಷ್ಯದಲ್ಲಿ ಏಕವ್ಯಕ್ತಿಯು ಜಗತ್ತಿನ ಅತಿ ದೊಡ್ಡ ರಾಷ್ಟ್ರವನ್ನು ಆಳುತ್ತಿದ್ದಾನೆ. ಅಂಧ ಶ್ರದ್ಧೆಗಳನ್ನು ಬುಡಸಹಿತ ಕಿತ್ತೊಗೆದು ನಾಸ್ತಿಕತ್ವವನ್ನು ಬೋಧಿಸುವ ಈ ರಾಷ್ಟ್ರವು ಇತರ ರಾಷ್ಟ್ರಗಳಿಗೆ ಆದರ್ಶಪ್ರಾಯವಾಗಿರುವುದೇ?

●

**ರಷ್ಯದ ಸೈನ್ಯಾಧಿಪತಿಗಳು.**



ಜೆಕೊಸ್ಲೊವೇಕಿಯದ ಪರಿಸ್ಥಿತಿಯನ್ನು ಪೂರ್ಣವಾಗಿ ತಿಳಿದುಕೊಳ್ಳುವ ದಕ್ಕಾಗಿ ಈ ಅಧಿಕಾರಿಗಳು ಇತ್ತೀಚೆಗೆ ಜೆಕೊಸ್ಲೊವೇಕಿಯಕ್ಕೆ ತೆರಳಿದರು. ನಾಝಿ ಪ್ರಭಾವವನ್ನು ಯಶಸ್ವಿಯಾಗಿ ವಿರೋಧಿಸುವ ಹಂಚಿಕೆಗಳನ್ನು ಮಾಡುವುದೇ ಅವರ ಸಂದರ್ಶನೆಯ ರಹಸ್ಯವಾಗಿತ್ತು.

ಸಾವಿರಾರು ವರುಷಗಳಿಂದ ನಡೆದುಕೊಂಡು ಬಂದಿರುವ ಅಂಧ ಶ್ರದ್ಧೆಗಳನ್ನು ಕಿತ್ತೊಗೆದು, ಅನಿರೀಕ್ಷಿತ ಸ್ವಾತಂತ್ರ್ಯವನ್ನು ಗಳಿಸಿರುವ ರಷ್ಯವು ಜಗತ್ತಿನ ರಾಷ್ಟ್ರಗಳಿಗೆ ಒಂದು ಆದರ್ಶವಾಗಲು ಯತ್ನಿಸುತ್ತಿದೆ. ವಿವಿಧ ರಾಷ್ಟ್ರಗಳ ಪ್ರಚಾರದ ದೆಸೆಯಿಂದಾಗಿ ನಮಗೆ ಸೊವಿಯೆಟ್ ರಷ್ಯದಲ್ಲಿ ಏನಾಗುತ್ತಿದೆಯೆಂಬ ವಿವರವು ತಿಳಿಯುವುದಿಲ್ಲ. ಆಗಾಗ ನಡೆಯುತ್ತಿರುವ ರಾಜಕೀಯ ವಿಚಾರಣೆಗಳ ಸುದ್ದಿಯಲ್ಲದೆ ರಷ್ಯದ ಜನತೆಯ ಪರಿಸ್ಥಿತಿಯು ಹೇಗಿದೆಯೆಂದು ನಮ್ಮ ವಾರ್ತೆಗಳು ಹೇಳುವುದಿಲ್ಲ. ಫ್ರಾಂಕ್ ಲಾಸನ್ ಎಂಬ ಪ್ರಸಿದ್ಧ ಪತ್ರಿಕೋದ್ಯಮಿಗಳು ರಷ್ಯದಲ್ಲಿ ಸಂಚರಿಸಿ ಬರೆದ ಉಪಯುಕ್ತ ಲೇಖನದ ಪ್ರಾಮುಖ್ಯಾಂಶಗಳನ್ನು ಕೆಳಗೆ ಕೊಡಲಾಗಿದೆ.

**ಸೊವಿಯೆಟ್ ರಷ್ಯವೆಂದರೆ ಒಬ್ಬ ವ್ಯಕ್ತಿಯ ಆಟ!**

ರಷ್ಯವನ್ನು ಇತರ ರಾಷ್ಟ್ರಗಳು ಕಡೆಗಣಿಸಲು ಸಾಧ್ಯವಿಲ್ಲ. ಕಾರಣ ಅಲ್ಲಿ ಹೊಸ ಸಮಾಜರಚನೆಯ ಮಹತ್ವದ ಕಾರ್ಯವು ಮಾಡಲ್ಪಡುತ್ತಿದೆ. ಅಂಧವಿಶ್ವಾಸಗಳ ತಳಹದಿಯನ್ನು ಕೆಡವಿಹಾಕಿ, ಬೊಲ್ಶೆವಿಕ್ ಧ್ಯೇಯಗಳ ಸಾಧನೆಗಾಗಿ ಹೋರಾಡುತ್ತಿದೆ. ಇತರ ರಾಷ್ಟ್ರಗಳು ಸೊವಿಯೆಟಿನ ಹೆಸರೆತ್ತಿದೊಡನೆಯೇ ತಮ್ಮ ಅಸಮ್ಮತಿಯನ್ನು ಅಪ್ರತ್ಯಕ್ಷವಾಗಿ ಸೂಚಿಸುತ್ತವೆ. ಅಲ್ಲಿಯ ವಿಧಾನಗಳು, ಅಲ್ಲಿಯ ರೀತಿಗಳು ಇವೆಲ್ಲವನ್ನು ಇಂಗ್ಲಿಷರೇ ಮೊದಲಾದವರು ವಿರೋಧಿಸುತ್ತಾರೆ. ಇದಕ್ಕೆ ಕಾರಣವೇನಿರಬಹುದು? ನವೀನ ರಷ್ಯದ ಹಿಂದಿರುವ ಏಕಮಾತ್ರ ವ್ಯಕ್ತಿಯೆಂದರೆ ಸ್ಟಾಲಿನ್. ಯೂನಿಯನ್ ಆಫ್ ಸೊವಿಯೆಟ್ ಸೋಶಿಯಲಿಸ್ಟ್ ರಿಪಬ್ಲಿಕಿನ ಹಿಂದಿನಿಂದ ಈ ವ್ಯಕ್ತಿಯು ದೊಡ್ಡ ಗೊಂಬೆಯಾಟವನ್ನು ಮಾಡುತ್ತಿದ್ದಾನೆ. ತನ್ನ ಖಾಸಗಿ ಜೀವನದಲ್ಲಿ ಸ್ಟಾಲಿನನು ದಯಾಳುವಾಗಿದ್ದರೂ ಇತ್ತೀಚೆಗೆ ಅವನ ಜೀವಾಪಹರಣ ಮಾಡಲು

ಅವನ ಆತ್ಮೀಯರಾಗಿದ್ದವರು ಯತ್ನಿಸುತ್ತಿರುವುದರಿಂದ ಟ್ರಾಟ್ಸ್ಕಿಯ ಕಡೆಯವರು ಉಪದ್ರವಿಸುತ್ತಿರುವರೆಂಬ ಬೆದರಿಕೆಯಿಂದ ಅವನ ಮನೋವೃತ್ತಿಯು ವ್ಯತ್ಯಾಸವಾಗಲಾರಂಭಿಸಿದೆ,

**ಟ್ರಾಟ್ಸ್ಕಿ ಮತ್ತು ಸ್ಟಾಲಿನ್**

ಲಿಯೋನ್ ಟ್ರಾಟ್ಸ್ಕಿ! ಮೆಕ್ಸಿಕೋವಿನಲ್ಲಿ ಯುನೈಟೆಡ್ ಸ್ಟೇಟ್ಸಿನ ಕೃಪೆಯಿಂದ ಜೀವಿಸಿ, ಲೋಕಕ್ರಾಂತಿಯ ದೀರ್ಘ ಯೋಜನೆಗಳನ್ನು ಮಾಡುತ್ತಿರುವ ಈ ವ್ಯಕ್ತಿಗೂ ಸ್ಟಾಲಿನನಿಗೂ ಇರುವ ವ್ಯತ್ಯಾಸವೇನು? ಲೋಕಕ್ರಾಂತಿಯಾಗಬೇಕೆಂದು ಟ್ರಾಟ್ಸ್ಕಿಯ ಅಭಿಪ್ರಾಯ. "ರಷ್ಯವನ್ನು ಆರ್ಥಿಕ ಹಾಗೂ ಸೈನಿಕಶಕ್ತಿಯ ದೃಷ್ಟಿಯಲ್ಲಿ ಮಹಾ ರಾಷ್ಟ್ರವನ್ನಾಗಿ ಮಾಡಿದರೆ ಲೋಕ ಕ್ರಾಂತಿಯನ್ನುಂಟುಮಾಡುವ ಆವಶ್ಯಕತೆಯೇ ಇಲ್ಲ" ವೆಂದು ಸ್ಟಾಲಿನನ ಹೇಳಿಕೆ. "ಜಗತ್ತು ನಮ್ಮನ್ನು ಅನುಕರಿಸುವಂತಾಗಲಿ. ಎಲ್ಲಾ ಸಾಧನಗಳಲ್ಲಿ ಎಲ್ಲರಿಗೂ ಸಮಾನ ಹಕ್ಕಿರಬೇಕೆಂಬುದನ್ನು ಮಾನ್ಯಮಾಡಲಿ" ಎಂದವನು ಹೇಳುತ್ತಿದ್ದಾನೆ.

**ಸ್ಟಾಲಿನನ ವ್ಯವಸ್ಥಾಪನಾ ಶಕ್ತಿ!**

ರಷ್ಯದಂತಹ ದೊಡ ರಾಷ್ಟ್ರದ ನವೀನ ವ್ಯವಸ್ಥೆಯ ಹೊಣೆಗಾರಿಕೆಯನ್ನು ವಹಿಸುವುದು ಸಾಮಾನ್ಯ ಕೆಲಸವಲ್ಲ. ಅವನಲ್ಲದಿದ್ದರೆ ರಷ್ಯದ ಪರಿಸ್ಥಿತಿಯು ಕೆಟ್ಟುಹೋಗಬಹುದಿತ್ತೆಂದು ರಷ್ಯದ ಜನರ ಅಭಿಪ್ರಾಯವಾಗಿದೆ. ಒಂದೊಂದು ಜಿಲ್ಲೆಯಷ್ಟು ದೊಡ್ಡ ಗದ್ದೆಗಳನ್ನು ಸಾಂಘಿಕ ವ್ಯವಸಾಯವನ್ನು ಮಾಡಿಸುವುದು ಚಿಕ್ಕ ಕೆಲಸವಲ್ಲ. ದೊಡ್ಡದೊಡ್ಡ ಪ್ರದೇಶಗಳನ್ನು ಒಬ್ಬರಾಧೀನ ಕೊಡುತ್ತಾರೆ. ಅವುಗಳ ಮೇಲ್ವಿಚಾರಣೆ ಮಾಡುವವರಿಗೆ "ಕಮೊಸರ್" ಎನ್ನುತ್ತಾರೆ. ಈ ಪ್ರದೇಶಗಳಲ್ಲಾಗ ಬೇಕಾದ ಕೆಲಸಗಳನ್ನು ಬೇರೆ ಬೇರೆ ವ್ಯಕ್ತಿಗಳಿಗೆ ಹಂಚಿಕೊಡುತ್ತಾರೆ. ಬೀಜದಿಂದ ಮೊದಲ್ಗೊಂಡು ಪೈರು ಕೊಯ್ಯುವ ಯಂತ್ರದ ತನಕ ಎಲ್ಲಾ ಸಾಧನಗಳನ್ನು ಸರಕಾರವೇ ಒದಗಿಸುತ್ತದೆ. ಬೆಳೆ ಚೆನ್ನಾಗಿಲ್ಲದಿದ್ದರೆ ಜುಲ್ಮಾನೆಯಿರುವುದಾದರೆ, ಯಶಸ್ವೀಬೆಳೆಯಾದರೆ ದುಡಿದವರಿಗೆ ಬಹುಮಾನವನ್ನು ಕೊಡುತ್ತಾರೆ. ರಷ್ಯದಲ್ಲಿ ಖಾಸಗಿ ಸ್ವತ್ತೆಂಬುದೇ ಇಲ್ಲವೆಂದು ಹಲವರ ಅಭಿಪ್ರಾಯ. ಪ್ರಾರಂಭದಲ್ಲಿ ಈ ಕ್ರಮವು ಜಾರಿಯಲ್ಲಿದ್ದರೂ ಈಗ ಖಾಸಗಿ ಸ್ವತ್ತುಗಳನ್ನು ಯಾರೂ ಇಟ್ಟುಕೊಳ್ಳಬಹುದು. ಆದರೆ ಅದು ಮೇರೆ ಮೀರಿರಬಾರದು. ಎಲ್ಲಾ ಸಾಧನಗಳನ್ನು ಉಪಭೋಗಿಸುವ ಸರಿಸಮಾನ ಹಕ್ಕು ಎಲ್ಲರಿಗೂ ಇರಬೇಕೆಂಬುದೇ ಕಮ್ಯೂನಿಸಮ್ಮಿನ ಧ್ಯೇಯ. ಮಕ್ಕಳ ಪೋಷಣೆ, ವೈಜ್ಞಾನಿಕ ಪ್ರಗತಿ, ಭೂಮಿಯ ಉಪಯೋಗ-ಇವೇ ಮೊದಲಾದುವುಗಳಿಗೆ ಸರಕಾರವು ತುಂಬಾ ಗಮನವೀಯುತ್ತಿದೆ. ಆದರೆ ಸಾರ್ವಜನಿಕ ಆರೋಗ್ಯವು ಅಷ್ಟೊಂದು ಚೆನ್ನಾಗಿರುವುದಿಲ್ಲ. ಜನರಿಗೆ ಈ ದೋಷವು ತಿಳಿಯದ ವಿನಹ ಅದನ್ನು ಸರಕಾರವು ಸದ್ಯದಲ್ಲಿ ಸುಧಾರಿಸಲು ಯತ್ನಿಸುವಂತಿಲ್ಲ. ರಷ್ಯದಲ್ಲಿ ಇತರ ದೇಶಗಳಂತೆ ನಿರುದ್ಯೋಗವೆಂಬುದಿಲ್ಲ.

**ರಷ್ಯದ ಪ್ರಬಲ ಯುದ್ಧ ಸಾಧನಗಳು.**



ರಷ್ಯದ ಸೈನ್ಯವು ಸುಸಜ್ಜಿತವಾಗಿದೆ. ವಿಮಾನ ಪಡೆಯು ಬಹಳ ಬಲಯುಕ್ತವಾಗಿದೆ. ರಷ್ಯದ ಜನಕ ಲೆನಿನ್ ಮಹಾಶಯನ ಗೋರಿಯ ಬಳಿಯಲ್ಲಿ ಯುದ್ಧದ ಟಾಂಕಿಗಳು ಮುನ್ನಡೆಯುತ್ತಿರುವ ಒಂದು ದೃಶ್ಯ.

ಪ್ರತಿಯೊಬ್ಬನೂ ದುಡಿಯಬೇಕಾಗಿರುವುದರಿಂದ ಸರಕಾರವು ತನಗೂ ಜನತೆಗೂ ಪ್ರಯೋಜನಕಾರಿಯಾಗಿರುವ ಕೆಲಸವನ್ನು ಒದಗಿಸಿ ಕೊಡುತ್ತದೆ.

**ಸುಧಾಗಣೆಗಳ ಸುಗ್ಗಿ**

ರಷ್ಯದ ಪ್ರತಿಯೊಂದು ಗ್ರಾಮದಲ್ಲಿ ಲೌಡ್ ಸ್ಪೀಕರುಗಳು ಯಾವಾಗಲೂ ಪ್ರಚಾರ ಭಾಷಣಗಳನ್ನು ಪ್ರತಿಧ್ವನಿಸುತ್ತಿವೆ. ರಷ್ಯದಲ್ಲಿ ವಿವಾಹ ಪದ್ಧತಿಯು ಕಡೆಗಣಿಸಲ್ಪಡುತ್ತಿದೆ. ಕೌಟುಂಬಿಕ ಜೀವನದ ಬಿಗಿತವು ಅಲ್ಲಿ ಕಡೆಗಣಿಸಲ್ಪಟ್ಟಿದೆ. ಧರ್ಮವು ಹೀಯಾಳಿಸಲ್ಪಟ್ಟಿದೆ. ಮಕ್ಕಳನ್ನು ನಾಸ್ತಿಕ ವಾತಾವರಣದಲ್ಲಿಯೇ ಇರಗೊಡಿಸಲಾಗುತ್ತಿದೆ. ಆದರೆ ಮಕ್ಕಳ ಕುರಿತು ರಷ್ಯದಲ್ಲಿ ತೆಗೆದುಕೊಳ್ಳುವಷ್ಟು ಜಾಗ್ರತೆಯು ಬೇರೆಲ್ಲಿಯೂ ಕಾಣ ಸಿಗುವಂತಿಲ್ಲ. ಸೋವಿಯೆಟನ ವೈಜ್ಞಾನಿಕ ಪ್ರಯೋಗ ಶಾಲೆಗಳು ಜಗತ್ತಿಗೆ ಮಾದರಿಗಳಾಗಿವೆ. ಮಕ್ಕಳ ಜ್ಞಾನ ಸಂಗ್ರಹವು ಆಶ್ಚರ್ಯಕರವಾಗಿದೆ. ವಿಜ್ಞಾನದ ಮೇರೆ ಮೀರಿರುವ ಪ್ರತಿಯೊಂದು ವಿಚಾರವೂ ರಷ್ಯದಲ್ಲಿ ಕಡೆಗಣಿಸಲ್ಪಡುತ್ತಿದೆ.

**ಸ್ಟಾಲಿನಿನ ಬೆಂಗೋಲುಗಳು!**

ಜೋಸೇಫ್ ಸ್ಟಾಲಿನನಿಗೆ ನಾಲ್ಕು ಬೆಂಗೋಲುಗಳಂತಿರುವ ನಾಲ್ವರು ಸಹಾಯಕರಿದ್ದಾರೆ. ಪ್ರಾಯಶಃ ಇಬ್ಬರ ಹೆಸರನ್ನು ನೀವು ಇದುವರೆಗೆ ಕೇಳಿರಲಿಕ್ಕಿಲ್ಲ. ಯೆಝೋವ್ ಈ ಮಹಾಶಯನು ಗ್ರಹಸಚಿವರ ಕೆಲಸಮಾಡುತ್ತಿದ್ದಾನೆ. ಮೊದಲು ಇವನು ಸ್ಟಾಲಿನನ ಖಾಸಗಿ ಪೋಲೀಸ್‌ಪ್ರಧಾನನಾಗಿದ್ದ. ಕ್ರೂಶ್ಚೆಫ್ ಇವನು ಕಮ್ಯೂನಿಸ್ಟ್ ಪಕ್ಷದ ಮುಖ್ಯಾಧಿಕಾರಿ. ವೊರೋಶಿಲೊಫನು ಈಗಲೂ ರಷ್ಯದ ಸೈನ್ಯಾಧಿಕಾರಿಯಾಗಿದ್ದಾನೆ. ಲಿಟ್ವಿನಾಫ್ ವಿದೇಶಮಂತ್ರಿಯಾಗಿ ದಕ್ಷತೆಯಿಂದ ಕಾರ್ಯ ನಿರ್ವಹಿಸುತ್ತಿದ್ದಾನೆ. ಈ ನಾಲ್ವರು ಒಂದಾಗಿ ರಷ್ಯದ ಪುನರ್ನಿರ್ಮಾಣ ಕಾರ್ಯಕ್ಕಾಗಿ ಹೊಸತೊಂದು ಯೋಜನೆಯನ್ನು ಮಾಡುತ್ತಿದ್ದಾರೆ. ಪ್ರಾಯಶಃ ಇದು ಬೇಗನೆ ಜಾರಿಗೆ ಬರಲಿದೆ.

**ಜಾತಿ ವ್ಯತ್ಯಾಸಗಳಿಲ್ಲ**

ರಷ್ಯದಲ್ಲಿ ಜಾತಿ ಮತ ವರ್ಣವ್ಯತ್ಯಾಸಗಳಿಲ್ಲ. ಉಕ್ರೇನಿನ ಕಿಯೆಫ್ ಎಂಬಲ್ಲಿ ರಷ್ಯನರು, ಚೀನೀಯರು, ತುರ್ಕರು, ಜಾರ್ಜಿಯನರು, ನೀಗ್ರೋಗಳು, ಭಾರತೀಯರು ಮಾತ್ರವಲ್ಲ, ಇನ್ನು ಹಲವು ಜನಾಂಗದವರು ದುಡಿಯುತ್ತಿದ್ದಾರೆ. ಅಲ್ಲಿ ಹಲವು ಚೀನೀಯರು ಸೈನ್ಯಾಧಿಕಾರಿಗಳಾಗಿದ್ದಾರೆ. ಒಬ್ಬ ಭಾರತೀಯರು ಈಗಲೂ ಪ್ರಚಾರ ಕಾರ್ಯದ ಪ್ರಧಾನರಾಗಿದ್ದಾರೆ.

**ನಾಝಿ ವಿರೋಧ**

ಉಕ್ರೇನಿನಲ್ಲಿ ನಾಝಿ ಪ್ರಭಾವವನ್ನು ಬೆಳೆಸಲು ಹಿಟ್ಲರನು ಮಾಡುತ್ತಿರುವ ಎಲ್ಲಾ ಯತ್ನಗಳನ್ನೂ ಸೋವಿಯೆಟ್ ರಷ್ಯವು ಕಾರ್ಯತಃ ವಿರೋಧಿಸುತ್ತಿದೆ. ಜೆಕೊಸ್ಲೋವೇಕಿಯನ್ನು ನಾಶಗೊಳಿಸುವುದರಲ್ಲಿ ಆಸ್ಥೆಯಿಂದ ಇಂಗ್ಲೆಂಡು ಮತ್ತು ಫ್ರಾನ್ಸುಗಳು ದುಡಿಯುತ್ತಿದ್ದಾಗ ರಷ್ಯವು ಸುಮ್ಮಗಿರದೆ ಯುದ್ಧವಾಗುವ ಪ್ರಸಂಗ

(೨೨ನೇ ಪುಟ ನೋಡಿರಿ.)

**ಜೆಕೊಸ್ಲೋವೇಕಿಯಕ್ಕೆ ಜನರಲ್ ಸಿರೋವಿಯವರು—?**



ಜೆಕೊಸ್ಲೋವೇಕಿಯದ ಮಾಜಿ ಪ್ರಧಾನರಾದ ಜನರಲ್ ಸಿರೋವಿಯವರು ಸದ್ಯದಲ್ಲಿಯೇ ರಷ್ಯಕ್ಕೆ ತೆರಳುವರೆಂದು ಪ್ರಕಟವಾಗಿದೆ. ರಷ್ಯದ ಸೇನಾಧಿಪತಿಗಳು ಜೆಕೊಸ್ಲೋವೇಕಿಯವನ್ನು ಸಂದರ್ಶಿಸಿರುವುದೂ, ಸಿರೋವಿಯವರು ರಷ್ಯಕ್ಕೆ ತೆರಳುವುದೂ ಬಹುದೊಡ್ಡ ರಹಸ್ಯವಾಗಿದೆ.

# ಕೆನರಾ ಮ್ಯೂಚುವಲ್ ಎಶ್ಯೂರೆನ್ಸ್ ಕಂಪೆನಿಯ ತೃತೀಯ ವಾರ್ಷಿಕ ವರದಿ.

ಈ ಕಂಪೆನಿಯ ೩೦—೯—೩೮ಕ್ಕೆ ಅಂತ್ಯವಾಗುವ ತೃತೀಯ ವಾರ್ಷಿಕ ವರದಿಯು ಸಮಾಲೋಚನೆಗಾಗಿ ನಮ್ಮ ಕೈಸೇರಿದೆ.

## ಮಿತವ್ಯಯ.

ಯಾವ ವಿಷಯದಲ್ಲಿ ಪರಾಮರ್ಶಿಸುವುದಿದ್ದರೂ, ತನ್ನ ಬಾಲ್ಯಾವಸ್ಥೆಯಲ್ಲಿರುವ ಈ ವಿಮಾಸಂಸ್ಥೆಯ ವರದಿ ವರ್ಷದ ಕಾರ್ಯಕಲಾಪಗಳು ಇತರ ಕಂಪೆನಿಗಳಿಗೆ ಆದರ್ಶಪ್ರಾಯವಾದವುಗಳೆನ್ನಬಹುದು. ಕಂಪೆನಿಯು೮,೦೯,೮೫೦ ರೂಪಾಯಿಗಳ ಹೊಸ ವ್ಯವಹಾರವನ್ನು ಈ ವರ್ಷದಲ್ಲಿ ಗಳಿಸಿದೆ. ಆದರೆ ಇಷ್ಟು ವ್ಯವಹಾರವನ್ನು ಗಳಿಸಿದರೂ ವ್ಯವಸ್ಥಾಪನೆಯ ಖರ್ಚಿನ ಮಿತವ್ಯಯವು ಲಕ್ಷ್ಯಾರ್ಹವಾಗಿದೆ. ಈ ಮಿತವ್ಯಯದ ಪರಿಣಾಮದಿಂದಾಗಿ ಕಳೆದ ವರ್ಷ ೪೫·೫% ನಷ್ಟು ಇದ್ದ ಖರ್ಚಿನ ದಾಮಾಶಯವು ಈ ವರ್ಷ ೩೬. ೬% ಕ್ಕೆ ಇಳಿದಿದೆ.

## ಉತ್ತಮ ವ್ಯವಹಾರ

ಕಳೆದ ವರ್ಷ ರೂಪಾಯಿ. ೮೦,೩೦೮-೩-೦ ರಷ್ಟಿದ್ದ ಪ್ರೀಮಿಯಮ್ ಉತ್ಪತ್ತಿಯು ಈ ಬಾರಿ ರೂ. ೧,೦೮,೬೯೧-೧೪-೦ಕ್ಕೆ ಏರಿದೆ. ಈ ಪೈಕಿ ಕಳೆದ ವರ್ಷದಲ್ಲಾದ ವ್ಯವಹಾರಗಳ ಬಗ್ಗಿನ ಪ್ರೀಮಿಯಮ್ ಆದಾಯವು ರೂಪಾಯಿ ೬೮,೪೩೦-೧೩-೦, ಈ ಎರಡು ಸಂಖ್ಯೆಗಳನ್ನು ತುಲನೆ ಮಾಡಿದರೂ ಹಿಂದಿನ ಎರಡು ವರ್ಷಗಳಲ್ಲಿ ನಡಿಸಲ್ಪಟ್ಟ ವ್ಯವಹಾರದಲ್ಲಿ ರೂಪಾಯಿ. ೧೧,೭೮೭-೬-೦ರಷ್ಟು ಪ್ರೀಮಿಯಮ್ ಉತ್ಪತ್ತಿಯನ್ನು ಕೊಡುವ ವಿಮಾಪತ್ರಗಳು ಮಾತ್ರ ಈ ವರ್ಷದಲ್ಲಿ ರದ್ದಾಗಿವೆಯೆಂದು ಗೋಚರವಾಗುತ್ತದೆ. (ಈ ಉತ್ಪತ್ತಿಯ ಹೆಚ್ಚುಕಮ್ಮಿಯನ್ನು ನೋಡುವಾಗ ಈ ವರ್ಷ ಮರಣದಿಂದಾಗಿ ಬಂದ ವಿಮಾಪತ್ರದ ಬೇಡಿಕೆಗಳ ಮೌಲ್ಯವನ್ನು ನಾವು ಪರಿಗಣಿಸಿಕೊಳ್ಳಬೇಕಾಗುತ್ತದೆ.) ಇದು ಕಳೆದ ವರುಷದ ಪ್ರೀಮಿಯಮ್ ಉತ್ಪತ್ತಿಯ ಹೆಚ್ಚು ಕಡಿಮೆ ೧೪. ೭% ರಷ್ಟಾಗುತ್ತದೆ. ಬೇರೆ ಕಂಪೆನಿಗಳ ಈ ದಾಮಾಶಯವನ್ನು ನೋಡಿದರೆ ಈ ರದ್ದಾದ ವಿಮಾಪತ್ರಗಳ ಸಂಖ್ಯೆಯು ಬಲು ಚಿಕ್ಕದಾಗಿದೆಯೆಂಬುದರಲ್ಲಿ ಎರಡಭಿಪ್ರಾಯವಿರಲಾರದು. ಇದರಿಂದ ಅರ್ಥವಾಗುವದೇನೆಂದರೆ ದೊಡ್ಡದೊಡ್ಡ ಸಂಖ್ಯೆಗಳನ್ನು ತೋರಿಸಿ, ಜನರನ್ನು ಮರುಳುಗೊಳಿಸುವ ಹವ್ಯಾಸಕ್ಕೆ ಈ ಕಂಪೆನಿಯು, ಬಲಿ ಬೀಳದೆ ನಿಜವಾಗಿಯೂ ಉತ್ತಮವಾದ (Stable) ವ್ಯವಹಾರವನ್ನೇ ಮಾಡಿದೆಯೆಂದು.

## ಸಂಸ್ಥೆಯ ಭದ್ರತೆ.

ಇನ್ನು ಕಂಪೆನಿಯ ಸ್ವತ್ತು ಮತ್ತು ಆಸ್ತಿಗಳ ಕಡೆಗೆ ನಮ್ಮ ಗಮನವನ್ನು ಕೊಟ್ಟರೆ ಒಟ್ಟು ರೂಪಾಯಿ. ೧,೯೯,೧೫೧—೧—೭ ರಷ್ಟಿರುವ ಸ್ವತ್ತಿನ ಪೈಕಿ ರೂ. ೬೮,೨೦೦/- ಕ್ರಯದ ರೂ. ೭೦,೦೦೦ ಗಳ ಸರಕಾರೀ ಪ್ರಾಮಿಸರಿ ನೋಟುಗಳ ರೂಪದಲ್ಲಿ ರಿಸರ್ವ್ ಬೇಂಕ್ ಆಫ್ ಇಂಡಿಯಾದಲ್ಲಿ ಠೇವಣಾತಿಯಾಗಿ ಇಡಲಾಗಿದೆ. ಈ ವರದಿಯು ಪ್ರಕಟವಾದ ಬಳಿಕ ಪುನಃರೂ. ೪೦,೦೦೦/- ಮೌಲ್ಯದ ಸರಕಾರೀ ಪತ್ರಗಳನ್ನು ರಿಸರ್ವ್ ಬೇಂಕಿನೊಡನೆ ಠೇವಣಾತಿ ಮಾಡಲಾಗಿದೆಯೆಂದು ತಿಳಿದು ಬರುತ್ತದೆ. ಎಂದರೆ - ಕಂಪೆನಿಯು ತನ್ನ ಹೆಚ್ಚು ಕಡಿಮೆ ಎಲ್ಲಾ ಸ್ವತ್ತನ್ನು (Asset) ಸರಕಾರೀ ಪತ್ರಗಳ ಮೇಲೆಯೇ ಭದ್ರವಾಗಿರಿಸಿದೆಯೆಂದು ವಿಶದವಾಗುತ್ತದೆ.

## ಸಿದ್ಧವಾದ ಸ್ವತ್ತು

ಇನ್ನು ಜೀವನಿಧಿಯ ವಿಚಾರ. ಕಳೆದ ವರ್ಷ ಇದರ ಸಂಖ್ಯೆ ರೂಪಾಯಿ ೪೮,೭೯೯-೧೫-೧೧ ಆಗಿತ್ತು. ಈ ವರ್ಷದಲ್ಲಿ ಅದು ರೂ. ೧,೦೮,೯೭೯—೧೩—೬ಕ್ಕೇರಿದೆ. ಮಾತ್ರವಲ್ಲ, ಇಷ್ಟೂ ಹಣವು ಸಿದ್ಧಸ್ವತ್ತಾಗಿ (Tangible Asset) ಸರಕಾರೀ ಪತ್ರದ ಮೇಲೆಯೇ ಇರುತ್ತದೆ. (ಕಂಪೆನಿಯೊಡನೆ ಈಗಿರುವ ಒಟ್ಟು ಸರಕಾರೀ ಪತ್ರಗಳ ಮೌಲ್ಯರೂಪಾಯಿ ೧,೧೦,೦೦೦.)

## ಅಭಿನಂದನೀಯ ಆಸ್ಥೆ

ಕೊನೆಯದಾಗಿ, ಮರಣದಿಂದಾಗಿ ಬಂದ ವಿಮಾಪತ್ರದ ಕೇಳಿಕೆಗಳನ್ನು

(೨೦ನೆ ಪುಟ ನೋಡಿ)

 

# ಇಲ್ಲಿದೆ ನಗು



ನಮ್ಮ ವಿನೋದಪ್ರಿಯ ವಾಚಕರು ಕಳುಹಿಸುವ ವಿನೋದಗಳನ್ನು ಈ ಭಾಗದಲ್ಲಿ ಅತ್ಯಾದರದಿಂದ ಪ್ರಕಟಿಸುತ್ತೇವೆ.

**ಹೊಸ ಅರ್ಥ**

ಗುರು– ರಾಮೂ ಪ್ರಶ್ನೆ ಪತ್ರಿಕೆಯಲ್ಲಿ ಬರೆದ, ಪಿ. ಟಿ. ಓ. (P.T.O) ಅಂದರೆ ಅರ್ಥವೇನೋ.

ರಾಮು–ಪಿ. ಟಿ. ಓ. ಅಂದರೆ.... ಪರಾಂಬರಿಸಿ, ತಿರುಗಿಸಿ, ಓದಿ, ಎಂದು ಅರ್ಥ, ಸಾರ್!

ooo

**ಸುಲಭೋಪಾಯ**

ತಾಯಿ- (ಮಗನನ್ನು ಕುರಿತು) ಕಿಟ್ಟೂ, ನನಗೆ ಬಂದಿರುವ ಜ್ವರ ಕೆಂಡದ ಹಾಗೆ ಸುಡುತ್ತದೆಯಲ್ಲೊ.

ಕಿಟ್ಟು- ಅದಕ್ಯಾಕಮ್ಮ ಚಿಂತೆ? ಈವತ್ತು ನಮ್ಮ ಮೇಷ್ಟರು ಯಾವ ಬಿಸಿಯಾದ ಪದಾರ್ಥವನ್ನು ಕೂಡ ತಣ್ಣೀರಿನಿಂದ ತಣ್ಣಗೆ ಮಾಡಬಹುದು ಎಂದರಮ್ಮ.

ತಾಯಿ-ಹುಚ್ಚು ಹುಡುಗ ಏನೇನೋ ಹೇಳ್ತೀಯಲ್ಲೋ?

ಕಿಟ್ಟು- ಏನೂ ಇಲ್ಲಮ್ಮ, ಈ ನೀರಿನ ಟ್ಯಾಂಕಿನಲ್ಲಿ ಸ್ವಲ್ಪ ಹೊತ್ತು ಮಲಗಿಕೊಳ್ಳಮ್ಮ, ಆ ಮೇಲೆ ಎಲ್ಲಾ ತಣ್ಣಗಾಗುತ್ತೆ!!

ooo

**ಪರೀಕ್ಷೆ ಕೋಟು**

ತಾಯಿ-ಸುಬ್ಬೂ, ಈ ಬೇಸಿಗೆಯಲ್ಲಿ ಸ್ಕೂಲಿಗೆ ಹೋಗಬೇಕಾದರೆ ಕಂಬಳಿ ಕೋಟು ಆಗಬೇಕೇನು?

ಸುಬ್ಬು-ಇಲ್ಲಮ್ಮಾ, ಇವತ್ತು ತಿಂಗಳಾಂತ್ಯ ಪರೀಕ್ಷೆ ಇದೆ.

— ಪಿ. ಕೆ. ಶ್ರೀನಿವಾಸ ಮೂರ್ತಿ
ಚೆನ್ನಪಟ್ಣ.

ooo

**ಮಾತೃಭಾಷೆಯ ಮಾದರಿ.**

ವೈದ್ಯ ವಿಶಾರದರೂ ಕನ್ನಡ ಭಾಷಾಭಿಮಾನಿಗಳೂ ಆದ ಡಾ॥ ರೊಡನೆ ಆಧುನಿಕ ಮತ್ತು ಆಂಗ್ಲ ಭಾಷಾಸಕ್ತರೊಬ್ಬರು ಹೀಗೆಂದು ಒಕ್ಕಣಿಸಿದರು:—

'ನನ್ನ *wife*ಗೆ....*yesterday* ....*three*...*times*...ಊ.... . *vomit* ಆಯಿತು *please*....ಉ ...*Examine* ಮಾಡಿ' ಛಿದ್ರವಾಗಿ ಆಡಿದ ತಮ್ಮ ಮಾತೃಭಾಷೆಯನ್ನು ಶಾಂತಿಯಿಂದ ಕೇಳಿದ ಡಾಕ್ಟರರು. '*Come*...ಮಾಡಿ... *see*ಮಾಡುತ್ತೇನಿ.' ಎಂದು ಪ್ರತ್ಯುತ್ತರವಿತ್ತರು

ಶ್ರೀ. ಯಚ್. ಆರ್. ದಾಸ್.
ಬೆಂಗಳೂರು

ooo

**ವಿವರಣೆ**

ಮೇಷ್ಟ್ರು—(ಹುಡುಗನನ್ನು ಕುರಿತು) ಪಾಂಡವರಲ್ಲಿ ನಾಲ್ಕನೆಯವನಿಗೆ ನಕುಲ ಎಂತ ಯಾಕೆ ಹೆಸರು ಬಂತೋ?

ಹುಡುಗ-ಅವನು ಯಾವ ಕುಲದವನು ಎಂತ ಗೊತ್ತಿದ್ದಿಲ್ಲ; ಅದಕ್ಕೇ ಅವನಿಗೆ ಆ ಹೆಸರು ಬಂತು ಸಾರ್.

—ಶ್ರೀ. ಎನ್. ಜಿ. ಎಸ್. ಮೂರ್ತಿ,
ಶಿವಮೊಗ್ಗಾ.

ooo

**ಗಟ್ಟಿ ಮನಸ್ಸು**

ಮಿತ್ರ-ಏನಯ್ಯ, ನೀನು ಚಾ ಕುಡಿಯುವದನ್ನು ಬಿಟ್ಟೇ ಬಿಟ್ಟೆ! ಹಾಗಾದರೆ ನಿನ್ನ ಮನಸ್ಸು ಬಲು ಘಟ್ಟಿ ಕಾಣಯ್ಯ.

ಉತ್ತರ-ನನ್ನ ಮನಸ್ಸಲ್ಲಾ ಕಾಣಯ್ಯ. ನನ್ನ ಹೆಂಡತಿಯ ಮನಸ್ಸು!

ಶ್ರೀ. ಪಿ. ಎಸ್. ಗುರುಮೂರ್ತಿ.
ಹೆಬ್ಬೂರು.

---

(೧೯ನೆ ಪುಟದಿಂದ)

ಪೂರೈಸಲು ಕಂಪೆನಿಯು ತೋರಿಸುತ್ತಿರುವ ಆಸ್ಥೆಯು ತುಂಬಾ ಅಭಿನಂದನೀಯವಾಗಿದೆ. ಈ ವರ್ಷದಲ್ಲಿ ಬಂದ ಒಟ್ಟು ರೂ. ೧೧,೧೭೪-೧-೦ ಮೌಲ್ಯದ ಕೇಳಿಕೆಗಳಲ್ಲಿ ವರದಿಯು ಪ್ರಕಟವಾಗವುದರೊಳಗಾಗಿ ರೂ. ಪಾಯಿ ೯,೧೭೪-೧-೦ ಸಂದಾಯವಾಗಿದೆ. ಈ ಆಸ್ಥೆಯಿಂದಾಗಿ ಜನತೆಯ ವಿಶ್ವಾಸವು ಕಂಪೆನಿಯ ಮೇಲೆ ಇನ್ನೂ ಹೆಚ್ಚಿ, ಸಂಸ್ಥೆಯು ಪ್ರಗತಿ ಪಥದಲ್ಲಿ ಮುನ್ನಡೆಯುತ್ತಾ ಹೋಗುವುದೆಂಬುದರಲ್ಲ ಸಂದೇಹವಿಲ್ಲ. ಕಂಪೆನಿಯು ಇಷ್ಟೊಂದು ಉತ್ತಮ ಸ್ಥಿತಿಯಲ್ಲಿದ್ದು ಚಲೋ ರೀತಿಯಲ್ಲಿ ತನ್ನ ಕಾರ್ಯಕಲಾಪಗಳನ್ನು ಸಾಗಿಸುತ್ತಿದೆ.

ಈ ಸಂದರ್ಭದಲ್ಲಿ ಕಂಪೆನಿಯ ಕಾರ್ಯದರ್ಶಿತ್ವವನ್ನು ವಹಿಸಿ, ಲಕ್ಷ್ಯಪೂರ್ವಕವಾಗಿ ಕೆಲಸಗಳನ್ನು ಸಾಗಿಸುತ್ತಾ ಬಂದಿರುವ 'ದಿ ಕೆನರಾ ಇಂಡಸ್ಟ್ರಿಯಲ್ ಎಂಡ್ ಬೇಂಕಿಂಗ್ ಸಿಂಡಿಕೇಟ್, ಲಿಮಿಟೆಡ್" ಸಂಸ್ಥೆಯೂ, ವ್ಯವಹಾರ ಕುಶಲರಾದ ಸಮರ್ಥ ಡೈರೆಕ್ಟರರೂ ಅಭಿನಂದನಾರ್ಹರಾಗಿರುವರು.

ಗೆಳೆಯರ ತಂಡದ ಸದಸ್ಯರಾಗಿ ಅಖಿಲ ಕರ್ನಾಟಕದ ಗೆಳೆಯರೊಡನೆ ಸಂಬಂಧ ಬೆಳೆಸಿರಿ.

# ಗೆಳೆಯರ ತಂಡ

ಗೆಳೆಯರ ತಂಡದ ಚಟುವಟಿಕೆಗಳಲ್ಲಿ ಭಾಗವಹಿಸಿ ನಿಮ್ಮ ಲೋಕ ಜ್ಞಾನವನ್ನು ಹೆಚ್ಚಿಸಿರಿ.

ವಾರ ೧೧

ಗೆಳೆಯರ ತಂಡಕ್ಕೆ ಬರೆಯುವಾಗ **"ಗೆಳೆಯರ ತಂಡ", C/o ಅಂತರಂಗ, ಉಡುಪಿ,** ಎಂದು ಬರೆಯಿರಿ.

ಒಲವಿನ ಗೆಳೆಯರೆ,

ನಮ್ಮ ತಂಡದ ಗೆಳೆಯರು ತುಂಬಾ ಹುರುಪಿನಿಂದ ತಂಡಕ್ಕಾಗಿ ಕೆಲಸ ಮಾಡುತ್ತಿದ್ದಾರೆಂಬುದಕ್ಕೆ ಪ್ರತಿವಾರ ಹೆಚ್ಚುತ್ತಿರುವ ತಂಡದ ಸದಸ್ಯರ ಸಂಖ್ಯೆಯೇ ಸಾಕ್ಷಿಯಾಗಿದೆ. ಮೊದಲೇ ಹೇಳಿರುವಂತೆ ೫೦ ಸದಸ್ಯರಾದೊಡನೆ "ತಂಡ"ವು ತನ್ನ ಚಟುವಟಿಕೆಗಳನ್ನು ಪ್ರಾರಂಭಿಸುವುದು.

ಮುಂದಿನ ವಾರದಿಂದ ಗೆಳೆಯರ ತಂಡಕ್ಕಾಗಿ ಅಂತರಂಗದಲ್ಲಿ ನಾಲ್ಕು ಪುಟಗಳನ್ನು ಮೀಸಲಾಗಿರಿಸುವ ಏರ್ಪಾಡು ಮಾಡಲಾಗಿವೆ. ತಂಡದ ಸದಸ್ಯರು ಬರೆದು ಕಳುಹಿಸುವ ಕತೆ, ಕವನ, ವಿನೋದ, ಇತ್ಯಾದಿಗಳು ಈ ವಿಭಾಗದಲ್ಲಿ ಪ್ರಕಟವಾಗಲಿವೆ. ಈ ಬಾರಿ ತಂಡದ ಉತ್ಸಾಹೀ ಸದಸ್ಯರಲ್ಲೊಬ್ಬರಾದ ಶ್ರೀ. ಜಿ. ಯಸ್. ಭಾಗವತರವರ "ಹೇ" ಎಂಬ ಕವನವನ್ನು ಪ್ರಕಟಿಸಿದ್ದೇನೆ. ಗೆಳೆಯರು ಕಳುಹಿಸಬಹುದಾದ ಲೇಖನ ಮೊದಲಾದವುಗಳಲ್ಲಿ ತಮ್ಮ ನಂಬರನ್ನು ಸೂಚಿಸಬೇಕೆಂದು ಕೋರುತ್ತೇನೆ.

ಜನವರಿ ತಿಂಗಳಲ್ಲಿ "ಕರ್ನಾಟಕ ಏಕೀಕರಣ ಚಳವಳದಲ್ಲಿ ಯುವಕರು ಹೇಗೆ ಭಾಗವಹಿಸಬಹುದು" ಎಂಬೊಂದು ಪ್ರಬಂಧ ಸ್ಪರ್ಧೆಯು ಪ್ರಾರಂಭಿಸಲ್ಪಡುವದು. ಇದರ ವಿವರಗಳನ್ನು ಮುಂದಿನ ವಾರ ಪ್ರಕಟಿಸುತ್ತೇನೆ. ತಂಡದ ಸದಸ್ಯರು ಪ್ರಬಂಧಕ್ಕೆ ಬೇಕಾದ ಮಾಹಿತಿಗಳನ್ನು ಈಗಲೇ ಸಂಗ್ರಹಿಸುವುದುತ್ತಮ.

ಅನೇಕ ಗೆಳೆಯರು ತಮ್ಮ ಭಾವ ಚಿತ್ರಗಳನ್ನು ಈಗಾಗಲೇ ಕಳುಹಿಸಿಕೊಟ್ಟಿದ್ದಾರೆ. ಇತರರು ಕೂಡಾ ತಮ್ಮ ಭಾವ ಚಿತ್ರಗಳನ್ನು ಬೇಗನೆ ಕಳುಹಿಸುವರೆಂದು ನನ್ನ ಭರವಸೆ. ೫೦ ಸದಸ್ಯರಾದೊಡನೆ ಅವುಗಳು ಈ ವಿಭಾಗದಲ್ಲೆ ಪ್ರಕಟಿಸಲ್ಪಡುವುವು.

ತಂಡದ ಸದಸ್ಯರು ತಮ್ಮ ಊರಿನ ವೈಶಿಷ್ಟ್ಯಗಳ ಕುರಿತು ಸ್ವಾರಸ್ಯವಾದ ಸಂಕ್ಷಿಪ್ತ ಲೇಖನಗಳನ್ನು ಬರೆದು ಕಳುಹಿದರೆ ಈ ವಿಭಾಗದಲ್ಲಿ ಅವುಗಳನ್ನು ಪ್ರಕಟಿಸುತ್ತೇನೆ. ಲೇಖನಗಳೊಡನೆ ಚಿತ್ರಗಳನ್ನು ಕಳುಹಿಸಬಹುದು.

ಇತಿ ತಮ್ಮ–

**'ಗೆಳೆಯ'**

---

## ತಂಡದ ಹೊಸ ಸದಸ್ಯರು

೨೭. ಶ್ರೀ. ನೀಲಕಂಠ ಲಕ್ಷ್ಮೀ ನಾರಾಯಣ ಭಟ್, ವಿಠೋಬ ದೇವಸ್ಥಾನ, ಕುಮಟಾ.

ನಿಮ್ಮ ಸದಸ್ಯತನದ ನಂಬರು ೨೭.

೦ ೦ ೦

೨೮. ಶ್ರೀ. ಮೂಲ್ಕಿ ಮಾಧವ ನಾಯಕ್. C/o ಕಾಮತ್ ಪ್ರೊವಿಷನ್ ಸ್ಟೋರ್ಸ್ ಮುಂಬಯಿ.

ನಿಮ್ಮ ಸದಸ್ಯತನದ ನಂಬರು ೨೮.

೦ ೦ ೦

೨೯. ಶ್ರೀ. ಕೆ. ಯಸ್. ಹೆಗ್ಡೆ, C/o ಡಿ. ಚಾರಿ, ಎಂಡ್ ಕೊ, ಮಾಟುಂಗ, ಮುಂಬಯಿ ೧೯.

ನಿಮ್ಮ ಸದಸ್ಯತನದ ನಂಬರು ೨೯

೦ ೦ ೦

೩೦. ಶ್ರೀ. ಡಿ. ಯಸ್. ಗುಂಡ, ಕರ್ನಾಟಕ ಕಾಲೇಜ್, ನ್ಯೂಬ್ಲಾಕ್ ರೂಮ್ ನಂ. ೪೯ ಧಾರವಾಡ.

ನಿಮ್ಮ ಸದಸ್ಯತನದ ನಂಬರು ೩೦.

೦ ೦ ೦

೩೧. ಶ್ರೀ. ಆರ್. ವಿ. ಕಟ್ಟಿ, ವಿದ್ಯಾರ್ಥಿ, ಗವರ್ನಮೆಂಟ್ ಹೈಸ್ಕೂಲ್, ಧಾರವಾಡ.

ನಿಮ್ಮ ಸದಸ್ಯತನದ ನಂಬರು ೩೧.

೦ ೦ ೦

೩೨ ಶ್ರೀ. ಯಂ. ಯಂ. ಅತ್ತರ್, ವಿದ್ಯಾರ್ಥಿ, ಗವರ್ನಮೆಂಟ್ ಹೈಸ್ಕೂಲ್, ಧಾರವಾಡ.

ನಿಮ್ಮ ಸದಸ್ಯತನದ ನಂಬರು ೩೨.

೦ ೦ ೦

೩೩. ಶ್ರೀ. ಲ. ಭೀ. ದೇಸಾಯಿ, ವಿದ್ಯಾರ್ಥಿ, ಗವರ್ನಮೆಂಟ್ ಹೈಸ್ಕೂಲ್, ಧಾರವಾಡ.

ನಿಮ್ಮ ಸದಸ್ಯತನದ ನಂಬರು ೩೩.

---

## ಗೆಳೆಯುನ ಟಪ್ಪಾಲು ಪೆಟ್ಟಿಗೆಯಿಂದ.

ಶ್ರೀ. ಟಿ. ಆರ್. ಭಾಗವತರ ಶುಭಾಕಾಂಕ್ಷೆ.

"ಗೆಳೆಯರ ತಂಡಕ್ಕೆ ನನ್ನ ನಾಲ್ಕು ಜನ ಗೆಳೆಯರನ್ನು ಸೇರಿಸಲು ನನಗೆ ಅತ್ಯಂತ ಅಭಿಮಾನವೆನಿಸುತ್ತದೆ. ತಂಡದ ಸದಸ್ಯರು ದಿನದಿಂದ ದಿನಕ್ಕೆ ಬೆಳೆಯುತ್ತಿರುವುದನ್ನು ಕಂಡು ನನಗೆ ಆನಂದವಾಗಿದೆ.ತಂಡವು ಇದೇ ಪ್ರಕಾರ ಬಿದಿಗೆಯ ಚಂದ್ರನಂತೆ ಬೆಳೆಯಲೆಂಬುದೇ ನನ್ನ ಬಲವಾದ ಹಾರೈಕೆ".

ಧಾರವಾಡ.........ಟಿ. ಆರ್. ಭಾಗವತ.

ಶ್ರೀ. ಟಿ. ಕೆ. ರಾಮಾಚಾರ್,
ಮುಂಬಯಿ,
ಅವರ ಶ್ಲಾಘನೀಯ ಉತ್ಸಾಹ.

"ಈ ಸಾರಿ ನನ್ನ ಸ್ನೇಹಿತರಿಬ್ಬರ ಹೆಸರನ್ನು ಗೆಳೆಯರ ತಂಡಕ್ಕೆ ಕಳುಹಿಸಿದ್ದೇನೆ. ಇನ್ನು ಕೆಲವರು ಸೇರಲಿಚ್ಛಿಸಿದ್ದಾರೆ. ಆದರೆ ನನ್ನ ಹತ್ತಿರ ಕೂಪನ್ ಇಲ್ಲದೆ ಇದ್ದುದರಿಂದ ಹಿಂದಿನಿಂದ ಕಳುಹಿಸುತ್ತೇನೆ."

## "ಹೇ"

ಅನುವಾದಕರು: ಜಿ. ಎಸ್. ಭಾಗ್ವತ್,
ಕುಮಟಾ,
ಗೆಳೆಯರ ತಂಡದ ೧ಳನೆ ಸದಸ್ಯ.

●

ಸಂಗನ ಹಳ್ಳಿಯ ಢಂಬಾಚಾರಿ
ಸಂತೆಗೆ ಹೊರಟನು ಕುದುರೆಯನೇರಿ
ಏನದು ಕುದುರೆಯ ಮಾಧುರ್ಯ
ಗುಣದೊಳು ಅಡಗಿಹ ಸೌಂದರ್ಯ
ವೇಗದಿ ಓಡುತಲಿರುವಾಗ
ನುಡಿಯೊಂದಕೆ ನಿಲ್ಲುವದಾಗ.
'ಹೇ' ಎಂದೊಡೆ ಆ ಆಚಾರಿ
ಓಡುವದದು ಬಲು ಜೋರಾಗಿ.

ಕುದುರೆಯು ಅಗಸೆಗೆ ಬರಲಾಗಿ
ಹೊಳೆದನು ಭಾನುವು ಮೇಲಾಗಿ
ಹಸಿವಿನ ತಾಪದಿ ಬಳಲಿದನು
ಕಂಡನು ನೇರಲ ವೃಕ್ಷವನು.

ವೃಕ್ಷವು ಎತ್ತರ ಬೆಳೆದಿತ್ತು,
ಮುಳ್ಳಿನ ಮಧ್ಯದಿ ನೆಲೆಸಿತ್ತು,
ಚಿಗುರಿದ ನೂತನ ಪರ್ಣಗಳು
ಸುತ್ತಲು ಹರಡಿದ ರೆಂಬೆಗಳು.
ಇವುಗಳ ಮಧ್ಯದಿ ನಲಿಯುವವು
ಸುಂದರ ಸವಿಕರ ಹಣ್ಣುಗಳು.
ಉದರದಿ ಹೆಚ್ಚಿತು ಕ್ಷುಧೆ ತೃಷೆಯು
ಮುಳ್ಳದು ಕಾಡಿತು ಬಹುಪರಿಯು.
ಕುದುರೆಯ ತಡೆದನು ಆಚಾರಿ
ನಿಂತನು ಆ ಕುದುರೆಯನೇರಿ.
ಹಣ್ಣನು ಕೊಯ್ಯಲು ನಿಂತಿರಲು
ಉಲುಕಾಡದೆ ನಿಂತಿತು ಹಯವು.

ಕೊಯ್ದನು ನೇರಲ ಹಣ್ಣನ್ನು
ಅಡಗಿಸಿಕೊಂಡನು ಹಸಿವನ್ನು
ಹೊಗಳಿದ ಕುದುರೆಯ ಗುಣವನ್ನು
ವರ ಪ್ರಾಮಾಣಿಕತನವನ್ನು
'ಸಿಗದಿಂತಹ ಹಯವಿನ್ನೆಲ್ಲು'
ಇದು ಆ ಆಚಾರಿಯ ಸೊಲ್ಲು
ಕುದುರೆಯೇರಿ ನಿಂತಿರಲಾಗಿ
ನೆನೆಸಿದನವನೀ ಈ ಪರಿಯಾಗಿ.

'ತಿಳಿಯದೆ ಜನ 'ಹೇ' ಎಂದೆನಲು
ಏನಾಗುವದೆನ್ನಯ ಬಾಳು!'
ಹಣ್ಣಿನ ಬದಿ ಮನ ನೆಲಸಿತ್ತು
'ಹೇ' ಎನ್ನುವ ನುಡಿ ಹೊರಬಿತ್ತು
ಕುದುರೆಯು ವೇಗದಿ ಧಾವಿಸಿತು.
ಒಡೆಯನ ಮೆಳೆಯಲಿ ಕೆಡವಿಸಿತು!

---

(೧೭ನೇ ಪುಟದಿಂದ)

ಇದ್ದರೆ ಚೆಕೊಸ್ಲೊವೇಕಿಯಕ್ಕೆ ಬೆಂಬಲವೀಯುವುದೆಂದು ಹೇಳಿತು. ಇತ್ತೀಚೆಗೆ ರಷ್ಯದ ಹಲವು ಸೈನಾಧಿಕಾರಿಗಳು ಜೆಕೊಸ್ಲೊವೇಕಿಯಕ್ಕೆ ಹೋಗಿ ಅಲ್ಲಿಯ ಪರಿಸ್ಥಿತಿಯನ್ನು ಸಂಪೂರ್ಣ ತಿಳಿಯಲು ಯತ್ನಿಸುತ್ತಿದ್ದಾರೆ. ಸ್ಟಾಲಿನನು ಈಗಾಗಲೆ ಟರ್ಕಿಯೊಡನೆ ಮಿತ್ರಸಂಬಂಧವನ್ನು ಬೆಳೆಸತೊಡಗಿದ್ದಾನೆ. ಅಮೇರಿಕವೂ ರಷ್ಯಕ್ಕೆ ವಿರೋಧವಾಗಿಲ್ಲ. ಈ ಯತ್ನಗಳನ್ನು ನೋಡುವಾಗ ರಷ್ಯವು ಫ್ಯಾಸಿಸ್ಟ್ ಸರ್ವಾಧಿಕಾರಿಗಳನ್ನು ಸದೆ ಬಡೆಯಲು ಸಿದ್ಧವಾಗಿದೆಯೆಂದು ಸ್ಪಷ್ಟವಾಗುತ್ತದೆ

### ಸೈನ್ಯ ಶಕ್ತಿ

ರಷ್ಯದ ಸೈನ್ಯ ಶಕ್ತಿಯು ಅಸಾಮಾನ್ಯವಾಗಿದೆ. ವಿಮಾನ ಪಡೆಯು ಕೂಡಾ ಜಗತ್ತಿನ ಇತರ ರಾಷ್ಟ್ರಗಳ ಪಡೆಗಳಿಗಿಂತ ಚೆನ್ನಾಗಿದೆ. ಆರ್ಥಿಕ ದೃಷ್ಟಿಯಲ್ಲಿಯೂ ಸೋವಿಯೆಟ್ ಶಕ್ತಿಪೂರ್ಣವಾಗಿದೆ. ಆದುದರಿಂದಲೇ ಜಪಾನು ಚೆಂಗ್‌ಫುಕಿಂಗ್‌ನಲ್ಲಿ ರಷ್ಯಕ್ಕೆ ತಲೆಬಾಗಿನಡೆಯಿತು.

### ಮುಂದೇನು?

ರಷ್ಯದ ಕ್ರಮವು ಜಗತ್ತಿನ ರಾಷ್ಟ್ರಗಳಿಗೆ ಆದರ್ಶವಾಗಿ ಪರಿಣಮಿಸುವುದೆ? ಎಂಬ ಪ್ರಶ್ನೆಗೆ ಕಾಲವೇ ಉತ್ತರವೀಯಬೇಕಾಗಿದೆ. ಆದರೆ ಇಷ್ಟು ಹೇಳಬಹುದು. ರಷ್ಯದಲ್ಲಿ ಕೆಲವೊಂದು ಅನ್ಯಾಯಗಳು ಇರುವುದಿದ್ದರೂ ಅಲ್ಲಿಯ ಹೆಚ್ಚಿನ ಕ್ರಮಗಳು ಮಾನವಜಾತಿಗೆ ಹಿತಕಾರಿಗಳಾಗಿವೆ. 'ಪ್ರಜಾಸತ್ತಾತ್ಮಕ'ವಿಧಾನಗಳಿಗಿಂತ ಚೆನ್ನಾಗಿವೆ. ಸೋವಿಯೆಟ್ ರಷ್ಯವು 'ನಿಗೂಢ ರಾಷ್ಟ್ರ'ವಾಗಿ ಇನ್ನೆಷ್ಟು ಕಾಲ ಉಳಿಯುವುದು?




ಪ್ರತಿವಾರವೂ ಕರ್ನಾಟಕದ ವಿವಿಧ ಭಾಗಗಳಿಂದ ಅಧಿಕ ಸಂಖ್ಯೆಯಲ್ಲಿ ಪ್ರಶ್ನೆಗಳು ಬರುತ್ತಿರುವುದರಿಂದ ಸ್ಥಳ ಸಂಕೋಚದ ದೆಸೆಯಿಂದ ಎಲ್ಲರ ಪ್ರಶ್ನೆಗಳು ಒಮ್ಮೆಯೇ ಉತ್ತರಿಸಲ್ಪಡಲಾಗುವುದಿಲ್ಲ.

- ಯೋಗ್ಯವಾದ ಪ್ರಶ್ನೆಗಳಿಗೆ ಯೋಗ್ಯವಾದ ಉತ್ತರಗಳು ಕೊಡಲ್ಪಡುವವು. ಕೇವಲ ತಮಾಷೆಗಾಗಿ ಕೇಳಲ್ಪಡುವಂಥವುಗಳಿಗೆ ತಮಾಷೆಯ ಉತ್ತರ ಕೊಡಲಾಗುವುದು.
- ಬಹಳ ಅಶ್ಲೀಲವಾದ ಪ್ರಶ್ನೆಗಳಿಗೆ ಈ ವಿಭಾಗದಲ್ಲಿ ಎಡೆಯಿಲ್ಲ.
- ಇತರ ಪತ್ರಿಕೆಗಳನ್ನು ಅಥವಾ ವ್ಯಕ್ತಿಗಳನ್ನು ಬೈದು ಕೇಳುವ ಪ್ರಶ್ನೆಗಳಿಗೆ ಉತ್ತರವು ಸಿಗಲಾರದು.
- ಪ್ರಶ್ನೆಗಳು ಸಾಧ್ಯವಾದಷ್ಟು ಮಟ್ಟಿಗೆ ಸಾರ್ವಜನಿಕ ಅಭಿರುಚಿಯುಳ್ಳದಾಗಿರಬೇಕು.

**ಶ್ರೀ. ಬಿ. ಆರ್. ನಟರಾಜೇ ಅರಸ್, ಬಿಡದಿ (ಬೆಂಗಳೂರು ಜಿಲ್ಲಾ)**

'ಬ್ರಿಟಿಷ್ ಭಾರತದಲ್ಲೂ, ಮತ್ತು ದೇಶಿ ಸಂಸ್ಥಾನದಲ್ಲೂ, ಕಾಂಗ್ರೆಸ್ ಸಂಸ್ಥೆಯು, ಸತ್ಯ, ಶಾಂತಿ, ಅಹಿಂಸೆಗಳ ಮೂಲಕ, ಪ್ರಜೆಗಳ ಹಿತಕ್ಕಾಗಿ, ತನು, ಮನ, ಧನಗಳನ್ನೆಲ್ಲಾ ಅರ್ಪಿಸಿ, ಕೆಲಸವನ್ನು ನಡಿಯಿಸುತ್ತಿದ್ದಾಗ್ಗ್ಯೂ, ಸಂಸ್ಥಾನದ ನರೇಂದ್ರರು, ಮತ್ತು ಅವರ ಸರ್ಕಾರಗಳು, ಪವಿತ್ರವಾದ ಕಾಂಗ್ರೆಸ್ ಸಂಸ್ಥೆಗಳ ಮೇಲೆ ದಬ್ಬಾಳಿಕೆಯನ್ನು ನಡಿಯಿಸುತ್ತಿರುವುದು ನ್ಯಾಯವೇ? ಮತ್ತು, ಸರಕಾರವು ಪ್ರಜೆಗಳ ಹಿತಕ್ಕಾಗಿಯೇ ಅಲ್ಲವೇ ಏರ್ಪಾಟಾಗಿರಬೇಕು? (ಕಾಂಗ್ರೆಸ್ ಮಾಡುವುದೆಲ್ಲವೂ ಸರಿಯೇ ಎಂದು ಹಲವರು ಕೇಳಬಹುದು. ಆದರೆ ಭಗವಂತ, ನಿಯಾಮಕ, ಪ್ರಕೃತಿ ಸೃಷ್ಟಿ, ಮಾನವ ಸೃಷ್ಟಿ ಇವುಗಳಲ್ಲಿ ಕೂಡ, ಸಾಧಕವನ್ನೇ ಕೊಟ್ಟು ಬಾಧಕವಿಲ್ಲದಂತಿರುವ ಸೃಷ್ಟಿಯೇ ಇಲ್ಲವೆಂದು ಧಾರಳವಾಗಿ ಹೇಳಬಹುದು. ಉದಾ. ವಿದ್ಯುಚ್ಛಕ್ತಿ, ಮತ್ತು ರೈಲು ಇತ್ಯಾದಿ, ಅಧಿಕ ಸಾಧಕವಿದ್ದು ಅಲ್ಪ ಬಾಧಕವಿದ್ದಲ್ಲಿ ಅದು ದೋಷವೆನ್ನಲಾಗುವುದಿಲ್ಲ. ಅದರಂತೆಯೇ ಕಾಂಗ್ರೆಸ್ ಸಂಸ್ಥೆಯು ಒಂದಲ್ಲವೇ ಅದ್ದರಿಂದ ಕೆಲವರು ಕಾಂಗ್ರೆಸನ್ನು ದೂರುತ್ತಿರುವುದೂ ಮತ್ತು ದಬ್ಬಾಳಿಕೆ ನಡೆಸುತ್ತಿರುವುದೂನ್ಯಾಯವೆ?) ತಿಳಿಸಿರಿ.'

ಲೋಕದಲ್ಲಿ ಒಂದು ಪ್ರಾಣಿಗೆ ಸುಖವಾಗಬೇಕಾದರೆ ಇನ್ನೊಂದಕ್ಕೆ ಅಸುಖವಾಗದೆ ಗತ್ಯಂತರವಿಲ್ಲ. ಆಶ್ರಿತ ಸಂಸ್ಥಾನಗಳಲ್ಲಿ ದಬ್ಬಾಳಿಕೆಯನ್ನು ನಡೆಸದೆ ಈಗಿನ ಕ್ರಮದಲ್ಲಿ ರಾಜ್ಯಭಾರ ನಡೆಸುವುದು ಪ್ರಯಾಸವೆಂದು ಆಳರಸರ ಅಭಿಪ್ರಾಯವಾಗಿರಬಹುದು. ಇಲ್ಲದಿದ್ದರೆ ಈ ಮೊದಲು ಅವರು ಪ್ರಜೆಗಳಿಗೆ ಜವಾಬ್ದಾರೀ ಸರಕಾರವನ್ನು ದಯೆಪಾಲಿಸಿ ತಮ್ಮ ಸಂಸ್ಥಾನಗಳಲ್ಲಿ ಶಾಂತಿಸೌಹಾರ್ದಗಳನ್ನು ನೆಲೆಸುತ್ತಿದ್ದರು. ಪ್ರಜಾಸತ್ತೆಯ ಈ ಕಾಲದಲ್ಲಿ ಕಾಲಗುಣವಿರುದ್ಧವಾದ ಪ್ರಮಾದಗಳಂತಿರುವ ಆಶ್ರಿತ ಸಂಸ್ಥಾನಗಳು ತಮ್ಮ ನಿರಂಕುಶ ಪ್ರಭುತ್ವವನ್ನು ನಡೆಸುವುದರಲ್ಲಿ ಅರ್ಥವಿಲ್ಲ. ಪ್ರಜೆಗಳ ಅಭಿಪ್ರಾಯವನ್ನು ಧಿಃಕ್ಕರಿಸಿ ಮನಬಂದಂತೆ ವರ್ತಿಸುವ ನರೇಂದ್ರರೂ, ಅವರ ಪೀಳಿಗೆಯವರೂ ತಮ್ಮ ನಿರಂಕುಶ ಪ್ರಭುತ್ವದ ಜೀವಮಾನದ ದಿನಗಳು ಗಣಿಸಲ್ಪಡುತ್ತಿವೆಯೆಂಬುದನ್ನು ಪ್ರಾಯಶಃ ಈಗಾಗಲೇ ತಿಳಿದಿರಬಹುದು. ಸಾಧ್ಯವಿರುವಷ್ಟು ಕಾಲ ತಮ್ಮ ಅಧಿಕಾರದ ರಥವನ್ನು ಪ್ರಜೆಗಳ ಎದೆಯ ಮೇಲೆ ನಡಿಸಿಯೇ ಬಿಡುವುದೆಂಬ ದೃಢನಿರ್ಧಾರವನ್ನು ಮಾಡಿರಬಹುದು. ಇಲ್ಲೊಂದು ರಾಮಸ್ವಾಮಿ, ಅಲ್ಲೊಂದು ಕ್ಯಾಡೆಲ್, ಇವರೇ ಮೊದಲಾದವರು ಈ ನಿರ್ಧಾರದ ಸಂಜ್ಞೆಗಳಂತಿದ್ದಾರೆ. ನ್ಯಾಯಾನ್ಯಾಯಗಳ ಅರಿವಿದ್ದರೂ ಅದನ್ನು ಸಂತೋಷದಿಂದ ಮರೆತಿರುವ ಈ ಪುಣ್ಯಪ್ರಭೃತಿಗಳು ಬಹುಕಾಲ ಹೀಗೆಯೇ ಮುನ್ನಡೆಯುವಂತಿಲ್ಲ. ಪ್ರಜೆಗಳ ಒಮ್ಮತದ ಕೂಗು ಭಾರತದ ವಿವಿಧ ಸಂಸ್ಥಾನಗಳಲ್ಲಿ ಪ್ರತಿಧ್ವನಿಸಿ, ಜವಾಬ್ದಾರೀ ಸರಕಾರವು ಸ್ಥಾಪಿಸಲ್ಪಡುವುದೆಂಬುದ

ರಲ್ಲಿ ನೀವು ಎಳ್ಳನಿತು ಸಂಶಯಪಡ ಬೇಕಾಗಿಲ್ಲ.

೦ ೦ ೦

**ಶ್ರೀ. ಯಂ. ವಿ. ರಾಮಚಂದ್ರಶೆಟ್ಟಿ, ಮಾರುತಿ ಹಾಲ್, ಮಾಂಡ್ಯ.**

'ಸಿನಿಮಾ ನಟಿಯರ ವಿಷಯದಲ್ಲಿ ಕೆಲವು ಪತ್ರಿಕೆಗಳು ಅಶ್ಲೀಲವಾಗಿ ಪ್ರಕಟಿಸಿದವೆಂದೂ ಇದು ತೀರಾ ಖಂಡನೀಯವೆಂದೂ ಕುಮಾರಿ. ಶಾಂತಾ ಆಪ್ಟೆಯವರು ತಮ್ಮ ಮೈಸೂರು ಪ್ರವಾಸದಲ್ಲಿ ಭಾಷಣ ಮಾಡಿದರು. ಈ ಅಶ್ಲೀಲ ಭಾವನೆಗೆ ಕಾರಣರು ಪತ್ರಿಕೆಗಳೊ? ನಟಿಯರೋ? ಕಮಲವು ಬಾಯ್ದೆರದ ಹೊರತು, ಭ್ರಮರವು ಅದರಲ್ಲಿ ಪ್ರವೇಶಿಸಿ, ಮಧುಪಾನ ಮಾಡಬಲ್ಲುದೇ?'

ಕೆಲವು ಪತ್ರಿಕೆಗಳು ಅಶ್ಲೀಲವಾಗಿ ಪ್ರಕಟಿಸಿದ್ದರೆ, ಕೆಲವು ಸಿನೆಮಾ ನಟಿಯರು ಅಶ್ಲೀಲವಾಗಿ ವರ್ತಿಸಿರಬಹುದೆನ್ನಿ. ಅದು ಹೇಗಿದ್ದರೂ ಈ ಶೀಲಾಶ್ಲೀಲ ಪ್ರಶ್ನೆಯು ಸದಾ ಸರ್ವದಾ ತನ್ನ ತಲೆಯೆತ್ತುತ್ತಾ ಇರುವುದೊಂದು ಬೇಸರದ ಸಂಗತಿ. ಕುಮಾರಿ ಆಪ್ಟೆಯವರು ಯಾವುದನ್ನು ಅಶ್ಲೀಲವೆಂದು ಹೇಳಿರುವರೆಂದು ನನಗರಿಯದು. ಪ್ರಾಯಶಃ ೭೦೦೦ ರೂಪಾಯಿಗಳ ಸಾಲದ ಪ್ರಶ್ನೆಯನ್ನು ಅವರು ಅಹಮ್ಮದಾಬಾದಿಗೆ ಹೋಗಿ ಒಂದೇ ದಿನದಲ್ಲಿ ಶಾಂತವಾಗಿ ತೀರ್ಮಾನಿಸಿದರೆಂಬ ಫಿಲ್ಮ್ ಇಂಡಿಯಾ ಪತ್ರಿಕೆಯ ಸುದ್ದಿಯೇ ಅವರಿಗೆ ಅಶ್ಲೀಲವಾಗಿ ಕಂಡಿರಬಹುದು. ಆದರೆ ಅವರು ಅದಕ್ಕಾಗಿ ಇನ್ನು ಮರುಗಬೇಕಾಗಿಲ್ಲ. ಕಾರಣ–ಈ ಮೊದಲೇ ಅದಕ್ಕೆ ತಕ್ಕ ಪ್ರತಿಫಲವನ್ನು ಅವರು ಕೊಟ್ಟಿದ್ದಾರೆ. ಬಹಳ ಅಶ್ಲೀಲರೀತಿಯಲ್ಲಿ ಸಂಪಾದಕರಾದ ಬಾಬೂರಾವ್ ಪಟೇಲರಿಗೆ ಚೆನ್ನಾಗಿ ಎರಡು ಪೆಟ್ಟನ್ನೇರಿಸಿ ನಿರಾಧಾರವೆಂದು ಅವರು ಹೇಳುವ ಪ್ರಕಟನೆಗಿಂತಲೂ ಹೆಚ್ಚಿನ ಮಹತ್ವದ 'ಅಶ್ಲೀಲ' ಕಾರ್ಯವನ್ನು ಮಾಡಿಬಿಟ್ಟಿದ್ದಾರೆ. ಒಟ್ಟಿನ ಮೇಲನ್ನುವುದಿದ್ದರೆ ಎಲ್ಲಾ ಸಾಹಿತ್ಯಗಳಿಂದ 'ಅಶ್ಲೀಲ' ವೆಂಬುದನ್ನು ಕಿತ್ತೊಗೆದು ಜಗತ್ತಿನಲ್ಲಿ 'ಅಶ್ಲೀಲ' ವೆಂಬುದೇ ಇಲ್ಲದಂತೆ ಮಾಡುವುದುತ್ತಮ- ಆಗ ಕಮಲಗಳು ಬೇಕಾದಷ್ಟು ಬಾರಿ ಬಾಯ್ದೆರೆಯಬಹುದು; ಭ್ರಮರವು ಕೂಡಿದಷ್ಟು ಬಾರಿ ಪ್ರವೇಶಿಸಿ ಮಧುಪಾನ ಮಾಡಬಹುದು. ಅಶ್ಲೀಲವೆಂಬುದನ್ನು ಕಿತ್ತೊಗೆಯುವುದಾದರೆ ಅದಕ್ಕೆ ನಿಮ್ಮ ಸಮ್ಮತಿಯಿದೆಯೆ?

೦೦೦

**ಶ್ರೀ. ಯಂ. ಭೋಜಸೆಟ್ಟಿ ಟೀಚರ್ ಮೇನೇಜರ್,ವರಂಗ.**

'ಮಹಾಶಯರೇ, ಇತ್ತೀಚೆಗೆ ಪತ್ರಿಕೆಗಳಿಗೆ ಘನವಾದ ಅದೊಂದು ಅಂಟುರೋಗವು ತಗಲಿಬಿಟ್ಟಿದೆ. ದಿನ, ವಾರ, ಮಾಸ ಭವಿಷ್ಯಗಳು ಪ್ರತಿಯೊಂದರಲ್ಲೂ ಪ್ರಕಟವಾಗುತ್ತಲಿವೆ. ಪತ್ರಿಕೆಗಳಿಗೆ ಪ್ರಕಟಿಸುವ ಹುಚ್ಚು ಹಿಡಿದಂತೆ ನನಗೆ ನನ್ನ ಭವಿಷ್ಯವನ್ನು ಓದಿ ತಿಳಿಯಬೇಕೆಂಬ ಭ್ರಾಂತಿ. ಆದರೆ ಈ ವರೆಗೂ ನನಗೆ ಒಂದಕ್ಕೊಂದು ಸಂಬಂಧ ರಹಿತವಾದ ಫಲಗಳು ಸಿಗುತ್ತಿದ್ದವು. ಕಾರಣವೇನೋ ತಿಳಿಯದು. ಆದಿರಲಿ! ನಿಮಗೆ ನಿಮ್ಮ ಭವಿಷ್ಯ ಓದಿ ತಿಳಿಯುವ ಮನಸ್ಸಿದೆಯೇ? ಇದ್ದರೆ ಫಲ ಹೇಗೆ? ದಯವಿಟ್ಟು ತಿಳಿಸುವಿರಾ! ನೋಡುವ ಅಭ್ಯಾಸವಿಲ್ಲದಿದ್ದರೆ ಏಕಿಲ್ಲ ವೆಂಬುದನ್ನೂ ಹೇಳುವಿರೇ?'

ಆ 'ಅಂಟುರೋಗ'ವು ನಿಮಗೂ ತಾಗಿತಲ್ಲಾ ಎಂಬುದೊಂದು ಬೇಸರದ ಸಂಗತಿ. ''ಭ್ರಾಂತಿ'' ತಾಗಿದವರಿಗೆ ಸಾಮಾನ್ಯವಾಗಿ 'ಸಂಬಂಧಸಹಿತ'ವಾದ ಫಲಗಳು ಸಿಗುವುದಿಲ್ಲ. ಆದುದರಿಂದ ನಿಮಗೆ 'ಒಂದಕ್ಕೊಂದು ಸಂಬಂಧರಹಿತವಾದ ಫಲಗಳೇ' ಸಿಕ್ಕುವುದರಲ್ಲಿ ಆಶ್ಚರ್ಯವೇನು? ಇದಕ್ಕೆ ಕಾರಣ-ನೀವಂದಿರುವಂತೆ ನಿಮಗೆ ಭ್ರಾಂತಿ ತಗಲಿರುವುದು! ಇನ್ನು ನನ್ನ ವಿಚಾರ. ಭವಿಷ್ಯದ ಬದನೆಕಾಯಿಯು ತತ್ಕಾಲಕ್ಕೆ ನನಗೆ ಬೇಕಾಗಿಲ್ಲ. ಇದಕ್ಕೆ ''ಭ್ರಾಂತಿ'' ಯುಂಟಾಗಬಹುದೆಂಬ ಭಯವೇ ಕಾರಣ.

---

## ಸಾದರ ಸ್ವೀಕಾರ

**ಪ್ರಮಾಥಿ ಸಂವತ್ಸರದ ಪಂಚಾಂಗ—**

ಪಂಚಾಂಗ ಕರ್ತರು. ಶ್ರೀ. ಬಡನಿಡಿಯೂರು ಕೃಷ್ಣದಾಸ ಭಟ್ಟರು ಪ್ರಕಾಶಕರು: ಶ್ರೀಮನ್ಮಧ್ವಸಿದ್ಧಾಂತ ಗ್ರಂಥಾಲಯ, ಉಡುಪಿ ಈ ಪಂಚಾಂಗವು ಆರ್ಯಭಟೀಯ ವಾಕ್ಯಕರಣ ರೀತ್ಯಾ ನಿತ್ಯ ಪಂಚಾಂಗ ಮತ್ತು ದೃಕ್ಸಿದ್ಧಾಂತ ರೀತ್ಯಾ ಗ್ರಹಸ್ಫುಟಗಳಿಂದ ಕೂಡಿರುತ್ತದೆ. ಟಪ್ಪಾಲು ಖರ್ಚು ಸೇರಿ ಇದರ ಬೆಲೆ ೦-೩-೦.

**ಶ್ರೀಪತಿ ಪಂಚಾಂಗ—**

ಶ್ರೀ. ಶ್ರೀಪತಿ ನರಸಿಂಹ ಅಡಿಗಳಿಂದ ಸೂರ್ಯಸಿದ್ಧಾಂತ ರೀತ್ಯಾ ಗುಣಿಸಿ ಪ್ರಕಟಿಸಲ್ಪಟ್ಟ ಶ್ರೀಪತಿಪಂಚಾಂಗದ ಪ್ರಮಾಥಿಸಂವತ್ಸರದ ಪಂಚಾಂಗವು ನಮ್ಮ ಕೈಸೇರಿದೆ. ಕ್ರಯ (?)

# ಅಂತರಂಗ

**ಆದಿತ್ಯವಾರ, ದಶಂಬರ ೨೫, ೧೯೩೮.**

## ಕಾಂಗ್ರೆಸಿನ ಶುದ್ಧೀಕರಣ.

ಮೊನ್ನೆ ವಾರ್ಧದಲ್ಲಿ ನಡೆದ ಕಾಂಗ್ರೆಸ್ ವರ್ಕಿಂಗ್ ಕಮಿಟಿಯ ಸಭೆಯಲ್ಲಿ ಸಂಸ್ಥೆಯ ಶುದ್ಧೀಕರಣದ ಠರಾವಾಗಿರುವುದು ಬಹಳ ಸಂತೋಷದ ವಿಷಯವಾಗಿದೆ. ಯಾವುದಾದರೊಂದು ಸಂಸ್ಥೆಯು ಅಧಿಕಾರದಲ್ಲಿರುವ ಕಾಲದಲ್ಲಿ ಸ್ವಾರ್ಥಿಗಳು ತಮ್ಮ ಹಿತಸಂಬಂಧಗಳನ್ನು ಕಾಪಾಡಿಕೊಳ್ಳಲು ಬಹುಸಂಖ್ಯೆಯಲ್ಲಿ ಸೇರುವುದು ಒಂದು ರೂಢಿಯಾಗಿ ಹೋಗಿದೆ. ಇಷ್ಟರವರೆಗೆ ಹಣವಿದ್ದವರು ಕಾಂಗ್ರೆಸಿನ ಎಲ್ಲಾ ಅಧಿಕಾರಗಳನ್ನು ತಮ್ಮ ಕೈವಶಪಡಿಸಿಕೊಳ್ಳಬಹುದಾಗಿತ್ತು. ಆದರೆ ಇನ್ನು ಮುಂದೆ ಅಂತಹ ಪರಿಸ್ಥಿತಿಯು ತಲೆದೋರಲಿಕ್ಕಿಲ್ಲವೆಂದು ನಮ್ಮೆಣಿಕೆ. ಯಾರು ಕಾಂಗ್ರೆಸಿಗಾಗಿ ದುಡಿದು ತಮ್ಮ ಯಥಾರ್ಥತೆಯನ್ನು ಕಾರ್ಯತಃ ತೋರಿಸುತ್ತಾರೋ ಅಂಥವರಿಗೆ ಮಾತ್ರ ಅಧಿಕಾರವು ದೊರಕುವುದಲ್ಲದೆ ಅನ್ಯರಿಗಿಲ್ಲ. ಈ ನಿಯಮದಿಂದಾಗಿ ಕಾಂಗ್ರೆಸ್ ಸಂಸ್ಥೆಯಲ್ಲಿ ಅಧಿಕಾರಕ್ಕಾಗಿ ಸ್ಪರ್ಧೆಗಳು ಕಡಿಮೆಯಾಗಬಹುದೆಂದು ಧೈರ್ಯದಿಂದ ಹೇಳಬಹುದು. ಗಾತ್ರದ ಬದಲು ಗುಣಕ್ಕೆ ಹೆಚ್ಚಿನ ಪ್ರಾಧಾನ್ಯವನ್ನು ಕೊಟ್ಟರೆ ಸಂಸ್ಥೆಯ ವ್ಯವಸ್ಥೆಯು ಉತ್ತಮವಾಗುವುದಲ್ಲದೆ, ಕೆಲಸಗಾರರು ಖ್ಯಾತಿಯ ಅಭಿಲಾಷೆಗಿಂತ ಹೆಚ್ಚು ಲಕ್ಷ್ಯವನ್ನು ಸೇವೆಗೀಯುವರೆಂಬುದು ನಿರ್ವಿವಾದ. ಕಾಂಗ್ರೆಸ್ ಘಟನೆಯ ಈ ವ್ಯತ್ಯಾಸದಿಂದಾಗಿ ನಮ್ಮ ಪ್ರಾಂತ್ಯದ, ವಿಶೇಷವಾಗಿ ದಕ್ಷಿಣ ಕನ್ನಡದ ಶೋಚನೀಯ ಪರಿಸ್ಥಿತಿಯು ಸುಧಾರಿಸಬಹುದೆಂದು ನಿರೀಕ್ಷಿಸಬಹುದೆ?

---



## ಹನಿಗಳು.

ಕಾಂಗ್ರೆಸು ತನ್ನ ಪೂರ್ಣತಾಟಸ್ಥ್ಯವನ್ನು ಬದಲಾಯಿಸಿರುವುದರಿಂದ ಸಂಸ್ಥಾನಗಳ ಕೆಲಸಗಾರರಿಗೆ ಕೊಂಚ ಸಂತೋಷವಾಗಿರಬಹುದು. ಢೆಂಕನಲಿನ ಪರಿಸ್ಥಿತಿಯು ನಾಲ್ಕೈದು ಸಂಸ್ಥಾನಗಳಲ್ಲಿ ತಲೆದೋರಿದರೆ ಪೂರ್ಣತಾಟಸ್ಥ್ಯದ ಬದಲು ಪೂರ್ಣ ಸಹಕಾರದ ಠರಾವಾಗಲೂ ಬಹುದು.

೦ ೦ ೦

ಅಸ್ಸಾಮಿನ ಮಿಶ್ರಮಂತ್ರಿಮಂಡಲದ ಬಿರುಗಾಳಿಯು ಬಂಗಾಳಕ್ಕೂ ಬೀಸಿ ಹುಲಿ-ಸಿಂಹ, ಯಾನೆ ಫಜ್ಲುಲ್ ಹಕ್ಕರನ್ನು ದಿಗಿಲುಗೊಳಿಸಿದೆಯಂತೆ. ಫಜ್ಲುಲ್‌ಹಕ್ಕರು ಜವಾಹರಲಾಲ ನೆಹರುಗಳನ್ನು ಜೇಬಿನೊಳಗಿಟ್ಟಂತೆ ಸುಭಾಷ ಬೋಸರನ್ನು ಮತ್ತೊಂದು ಜೇಬಿನೊಳಗಿಡಬಹುದಿತ್ತು!

೦ ೦ ೦

ಬ್ರಿಟಿಷ್ ಮತ್ತು ಅಮೇರಿಕದ ಸಂಯುಕ್ತಸಂಸ್ಥಾನಗಳು ಚೀನಕ್ಕೆ ಯುದ್ಧ ಸಾಲವನ್ನು ಕೊಡಲೊಪ್ಪಿದ್ದಕ್ಕೆ ಜಪಾನಿಗೆ ಸಿಟ್ಟುಬಂದಿದೆಯಂತೆ.

ಮತ್ತೇನಾದೀತು? ಹುಲಿಯ ಬಾಯಿಯಿಂದ ದನವನ್ನು ಸೆಳೆದೊಯ್ದರೆ ಅದಕ್ಕೆ ಸಿಟ್ಟು ಬರುವುದಿಲ್ಲವೆ?

೦ ೦ ೦

ಸರ್ದಾರ್ ಪಟೇಲರು ಮೈಸೂರು ಕಾಂಗ್ರೆಸ್ ಚಳವಳದ ಗಡಿಯಾರವನ್ನು ನಿಲ್ಲಸಿರುವರೆಂದೊಬ್ಬರ ವಾದ.

ಇತರರಿಗೆ ಅದನ್ನು ನಡೆಸಲಾಗುವುದಿಲ್ಲವೆ? ಛಳಿಗಾಲವಲ್ಲವೆ!

---

# ಉಕ್ರೇನಿಗಾಗಿ ರಷ್ಯಾ-ಜರ್ಮನಿ

## ಜೆಕ್ ಉಕ್ರೇನಿನಲ್ಲಿ ಹಿಟ್ಲರ್-ಸ್ಟಾಲಿನರ ಪ್ರಚಾರ ಯುದ್ಧ.

ಯುರೋಪಿನ ಯುದ್ಧ ಪ್ರಿಯರು.



ಹೆರ್ ಅಡಾಲ್ಫ್ ಹಿಟ್ಲರ್ ಮತ್ತು ಸೀನರ್ ಬೆನಿಟೊ ಮುಸ್ಸೋಲಿನಿಯರು ಕೈ ಕೈ ಹಿಡಿದುಕೊಂಡಿದ್ದಾರೆ. ಇವರ ವರ್ತನೆಯ ಮೇಲೆ ಲೋಕಶಾಂತಿ ಹೊಂದಿಕೊಂಡಿದೆ.

ಯುರೋಪಿನ ರಾಜಕೀಯ ವಾತಾವರಣವು ಹೇಗಿದೆ? ಹಿಟ್ಲರನು ಮ್ಯೂನಿಕ್ ಒಪ್ಪಂದಕ್ಕೆ ಕೇವಲ ನಟನೆಗಾಗಿ ಸಹಿಹಾಕಿರುವುದರ ಪರಿಣಾಮವೇನಾಯಿತು? ಇಟಲಿಯು ಫ್ರಾನ್ಸನ್ನು, ಜರ್ಮನಿಯು ಇಂಗ್ಲೆಂಡನ್ನು ತಮ್ಮ ಪತ್ರಿಕೆಗಳಲ್ಲಿ ಏಕಪ್ರಕಾರವಾಗಿ ಜರಿಯುತ್ತಿರುವ ಕಾರಣವೇನು? ಜರ್ಮನಿಗೆ ನಿಜವಾಗಿಯೂ ವಸಾಹತುಗಳು ಬೇಕಾಗಿವೆಯೆ? ಅದು ಆಫ್ರಿಕದ ಮೇಲೆ ಧಾಳಿಯಿಟ್ಟು ಬ್ರಿಟಿಷ್ ಮತ್ತು ಫ್ರೆಂಚ್ ವಸಾಹತುಗಳನ್ನು ನುಂಗಲು ಯತ್ನಿಸುವುದೆ?— ಈ ಪ್ರಶ್ನೆಗಳು ಇಂದು ಮಾನವ ಜಾತಿಯ ಮುಂದೆ ತಲೆಯೆತ್ತಿ ನಿಂತಿವೆ.

□

ಮ್ಯೂನಿಕ್ ಒಪ್ಪಂದದಿಂದಾಗಿ ಹಿಟ್ಲರನು ಫ್ರಾನ್ಸು-ರಷ್ಯಗಳೊಗಿನ ಮಿತ್ರಸಂಬಂಧವನ್ನು ಯಶಸ್ವಿಯಾಗಿ ಕೊನೆಗೊಳಿಸಿದ್ದಾನೆ. ಈ ದೃಷ್ಟಿಯಲ್ಲಿಯೇ ಮ್ಯೂನಿಕ್ ಒಪ್ಪಂದವು ಹಿಟ್ಲರನಿಗೆ ಜಯವನ್ನುಂಟುಮಾಡಿ ಕೊಟ್ಟಿತು. ಇನ್ನುಳಿದುದೆಂದರೆ ಫ್ರಾನ್ಸನ್ನು ಇಂಗ್ಲೆಂಡಿನಿಂದ ದೂರಗೊಳಿಸುವುದು. ಅದಕ್ಕಾಗಿಯೇ ಹಿಟ್ಲರನ ಪ್ರಚಾರ ಮಂತ್ರಿ ಡಾ| ಗೋಬೆಲ್ಸ್ ತನ್ನ ಬೈಗಳ ಸುರಿಮಳೆಯನ್ನು ಇಂಗ್ಲೆಂಡಿನ ಮೇಲೆ ಸುರಿಸುತ್ತಿರುವದು. ಅವನ ಫ್ಯಾಸಿಸ್ಟ್ ಮಿತ್ರನಾದ ಮುಸ್ಸೋಲಿನಿಯು ಫ್ರಾನ್ಸನ್ನು ಸಿಕ್ಕಾಬಟ್ಟೆ ವಿಮರ್ಶಿಸುತ್ತಿರುವುದನ್ನು ನೋಡುವಾಗ ಇಟಲಿ-ಜರ್ಮನಿಗಳು ಒಂದಾಗಿ ಫ್ರಾನ್ಸು ಬ್ರಿಟನುಗಳೊಳಗಿನ ಮೈತ್ರಿಯನ್ನು ಕಡಿದುಹಾಕಲು ಯತ್ನಿಸುತ್ತಿವೆಯೆಂದು ಸ್ಪಷ್ಟವಾಗುತ್ತದೆ. ಈ ಧ್ಯೇಯವನ್ನು ಸಾಧಿಸುವುದಕ್ಕಾಗಿಯೇ ಹೆರ್‌ವೊನ್ ರಿಬ್ಬೆಂಟ್ರಾಪನು ಪ್ಯಾರಿಸಿನಲ್ಲಿ ಫ್ರೆಂಚ್ ಜರ್ಮನ್ ಒಪ್ಪಂದದ ಏರ್ಪಾಡುಮಾಡಿ, ಯಾವಸಂದರ್ಭದಲ್ಲಿಯೂ ಫ್ರಾನ್ಸು ಜರ್ಮನಿನ ವಿರೋಧವಾಗಿ ನಡೆಯದೆಂಬ ಭರವಸೆಯನ್ನು ಪಡೆಯಲು ಯತ್ನಿಸುತ್ತಿರುವುದಾಗಿದೆ.

□

ಹಿಟ್ಲರನಿಗೆ ನಿಜವಾಗಿಯೂ ಆಫ್ರಿಕ ಮತ್ತು ಫ್ರೆಂಚ್ ವಸಾಹತುಗಳನ್ನು ಪಡೆಯುವ ಇಚ್ಛೆಯಿದೆಯೆ? ಇಲ್ಲ. ಹಿಟ್ಲರನ ತತ್ಕಾಲದ ಮಹದಭಿಲಾಷೆಯೆಂದರೆ ಸೋಸಿಯಲಿಸ್ಟ ಸೊವಿಯೆಟ್ ರಿಪಬ್ಲಿಕಿನ ಉಕ್ರೇನನ್ನು ಕೈವಶಪಡಿಸಿಕೊಳ್ಳುವುದಾಗಿದೆ. ಆ ಪ್ರಾಂತ್ಯದಲ್ಲಿ ೨೯ ಮಿಲಿಯ ಜನರಿದ್ದಾರೆ. ಎಲ್ಲಾ ಜನಾಂಗದವರೂ ಆ ಪ್ರಾಂತ್ಯದಲ್ಲಿ ವಾಸಿಸುತ್ತಿದ್ದಾರೆ. ಅವರಲ್ಲಿ ಶೇಕಡಾ ೮೦ ರಷ್ಟು ಮಂದಿ ಕೃಷಿಕರು. ಫಲವತ್ತಾದ ಆ ಭೂಮಿಯನ್ನು ಸೆಳೆದೊಯ್ದು ಅಲ್ಲಿಯ ಕೋಟಿಗಟ್ಟಲೆ ಕುರಿಗಳ ಮತ್ತು ವನಸಂಪತ್ತು, ಗೋದಿ, ಬಟಾಟೆ ಮೊದಲಾದ ಫಲಗಳು, ಇವೇ ಮೊದಲಾದುವುಗಳನ್ನು

ಯು
ಾದ
ದರ
ಂದು
ನೇಕಿ
ಯುದ
ತ್ಯಕ್ಕೆ
ಈ
ರ್ಮ
ಪೋ
ಗಳು
ತ್ತಿವೆ.
ಳಾಗು
ನಿನಲ್ಲಿ
ವನ್ನು
ಕ್ರೇನು
ಈಗಾ
ಷ್ಯವು
ದಿದೆ.
ೂರಕಿ
ಲದಲ್ಲಿ
ಸೊವಿ
ಪ್ರಾಂ
ರ್ಯ
ನ್ಸ್-
ಈಗಾ
ನಿಸಿದೆ.
ದ್ಧದಲ್ಲಿ
ಜರ್ಮ
ೂಸ್ಲೊ
ಸ್ಟಾಲಿನ
ನೆ

# ...ಗೆ ಯುದ್ಧವಾರಂಭಿಸುವುದೆ?

## ರಷ್ಯವನ್ನು ಮೂಲೆಪಾಲು ಮಾಡಲು ಸರ್ವಾಧಿಕಾರಿಗಳ ಯತ್ನ.

ಹಿಟ್ಲರ್ ಉಕ್ರೇನನ್ನು ನುಂಗಲು ಎಡೆಬಿಡದೆ ಯತ್ನಗಳನ್ನು ಮಾಡುತ್ತಾ ಬಂದರೆ, ರಷ್ಯ ಮತ್ತು ಜರ್ಮನಿಗಳೊಳಗೆ ಯುದ್ಧವಾಗುವುದು ಖಂಡಿತ. ಈ ಸಂದರ್ಭದಲ್ಲಿ ಫ್ರಾನ್ಸು ಹಿಂದಿನಿಂದ ಜರ್ಮನಿನೊಡನೆ ಹೋರಾಡಕೂಡದೆಂದೇ ಮೊನ್ನೆ ರಿಬ್ಬೆಂಟ್ರಾಪರು ಮಾಡಲೆತ್ನಿಸಿದ ಸಂಧಿಯ ಸಾರ. ಆದರೆ ಈ ಯೋಜನೆಯು ಎಷ್ಟರ ಮಟ್ಟಿಗೆ ಯಶಸ್ವಿಯಾಗುವುದೆಂದು ಹೇಳಲಾಗುವುದಿಲ್ಲ.

ನಾಝಿೂ ಪಕ್ಷದ ನವೀನ ಗುರಿ!




ಇದೇ ಕವಣೆಯಿಂದ ಜರ್ಮನಿಯು ಆಸ್ಟ್ರಿಯ, ಜೆಕೆಸ್ಲೋವೇಕಿಯಗಳನ್ನು ಗುರಿಯಿಟ್ಟು ಹೊಡೆಯಿತು. ಈಗ ಸೋವಿಯೆಟ್ ಉಕ್ರೇನಿಯದೆಡೆಗೆ ನೋಟವಿಟ್ಟಿದೆ.

ಉಕ್ರೇನಿಗಾಗಿ ರಷ್ಯ ಮತ್ತು ಜರ್ಮನಿಗಳು ಯುದ್ಧ ಮಾಡುವುವೆ? ಪ್ರಬಲ ರಷ್ಯದೊಡನೆ ಜರ್ಮನಿಯು ತನ್ನ ಶಕ್ತಿ ಪರೀಕ್ಷೆ ಮಾಡಲು ಸಿದ್ಧವಾಗಿರುವುದೆ? ಇಲ್ಲ. ಆದರೆ ಹಿಟ್ಲರನು ತನ್ನ ಸೈನ್ಯ ಸರಂಜಾಮುಗಳನ್ನು ಈ ಗಾ ಗಲೆ ಜೆಕೊಸ್ಲೊವಾಕ್ ಉಕ್ರೇನಿಗೆ ಕಳುಹಿಸಲಾರಂಭಿಸಿದ್ದಾನೆ. ರಷ್ಯವೂ ತನ್ನ ಕೆಲವು ಸೈನ್ಯವನ್ನು ಸೋವಿಯೆಟ್ ಉಕ್ರೇನಿಗೆ ಕಳುಹಿಸಿದೆ. ಯುದ್ಧವು ಎಂದು ಪ್ರಾರಂಭವಾಗಬಹುದೆಂದು ಹೇಳಲಾಗುವುದಿಲ್ಲ.

# ಭಗದತ್ತನ ಬಹಿರಂಗ ಪತ್ರಗಳು

**ಶ್ರೀ. ಜೆ. ಎ. ಸಾಲ್ಡಾನಾ,** ಎಂ. ಎಲ್. ಸಿ.
ಮಂಗಳೂರು—ಅವರಿಗೆ,

ಮಾನ್ಯ ಮಿತ್ರರೆ,

ದಕ್ಷಿಣ ಕನ್ನಡದ ಭಾಷೆಯು ಕನ್ನಡವಾಗಬಾರದೆಂದು ನೀವು ಅಭಿಪ್ರಾಯಪಟ್ಟಿರುವುದನ್ನು ಕೇಳಿ ಬಹಳ ಸಂತೋಷವಾಯಿತು. ನಮ್ಮ ಜಿಲ್ಲೆಯಲ್ಲಿ ಎಲ್ಲರೂ ಕೊಂಕಣಿ ಮಾತಾಡುವುದಲ್ಲದೆ ಯಾರಾದರೂ ಕನ್ನಡ ಮಾತಾಡುತ್ತಾರೆಯೆ? ಕೊಂಕಣಿ ಭಾಷೆಯೆಂದರೆ ಬಹಳ ಪ್ರಸಿದ್ಧವಾದುದು. ಅದಕ್ಕೆ ಲಿಪಿಯಿದೆ, ಎಲ್ಲಾ ತರದ ವೈಶಿಷ್ಟ್ಯಗಳಿವೆ. ಕೊಂಕಣಿಯ ಮುಂದೆ ಕನ್ನಡವೆಲ್ಲಿ? ತಮ್ಮ "ಉಪ್ಪು ಪಕ್ಷಿ ವಾದ"ಕ್ಕೆ ನನ್ನ ಎರಡು ಓಟುಗಳು! ಭಾಷಾವಾರು ಪ್ರಾಂತರಚನೆಗಾಗಿ ಎಲ್ಲೆಲ್ಲಿಯೂ ಚಳವಳ ವಾಗುತ್ತಿರುವಾಗ ತಾವು ಕನ್ನಡವು ದಕ್ಷಿಣ ಕನ್ನಡದ Lingua Franca ಆಗಿರಬಾರದೆಂದುದನ್ನು ನೋಡುವಾಗ ತಾವು ತಮ್ಮನ್ನೇ ಮರತಿರುವಂತೆ ಕಾಣುತ್ತದೆ. ಇಂಗ್ಲಿಷ್ ನಮ್ಮ ಮಾತೃಭಾಷೆಯಾಗಬೇಕೆಂದು ನೀವು ಹೇಳದಿರುವುದು ದೊಡ್ಡ ಪುಣ್ಯವೆನ್ನಬೇಕು.

ಇತಿ ಕೊಂಕಣಿ ಪ್ರಿಯ—
**ಭಗದತ್ತ.**

---

**ಶ್ರೀ. ಕೆ. ಕೆ. ಶೆಟ್ಟರಿಗೆ,**
ಮೊಕ್ಕಾಂ, ಮಂಗಳೂರು.

ಪ್ರಿಯ ರಾಜಕಾರಣಿಗಳೆ,

'ರಾಷ್ಟ್ರ ಬಂಧು'ವಿನಲ್ಲಿ ವಾರ ವಾರವೂ ಪ್ರಕಟವಾಗುತ್ತಿರುವ ನಿಮ್ಮ ಲೇಖನಗಳನ್ನು ಕಂಡು ಎಂಥವರೂ ಕಣ್ಣೀರಿಡಬೇಕು. ಶ್ರೀಮತಿ ಕಮಲಾದೇವಿ, ಶ್ರೀಯುತ ಶ್ರೀನಿವಾಸ ಮಲ್ಯ, ಮತ್ತು ತಾವು ದಕ್ಷಿಣ ಕನ್ನಡದ ತ್ರಿಮೂರ್ತಿಗಳಂತಿದ್ದಿರಿ! ಆಹಾ! ತ್ರಿಮೂರ್ತಿಗಳು ಹೀಗೆ ಬಡಿದಾಡಿಕೊಳ್ಳುವ ಕಾಲ ಬರಬೇಕೆ! ಕಲಿಯುಗದ ಮಹಿಮೆಯಿದು. ನಿಮ್ಮೆಲ್ಲರಿಂದಾಗಿ ನಮ್ಮ ಜಿಲ್ಲೆಯು ಯಶಸ್ಸಿನ ತುತ್ತತುದಿಗೇರಿದೆ. ಅಖಿಲಭಾರತ ಧುರೀಣೆಯರೆಂದು ಏಕಕಂಠದಿಂದ ಹೊಗಳುತ್ತಿದ್ದ, ನಿಮ್ಮ ರಾಜಕೀಯ ಗುರುಗಳಂತಿದ್ದ ಕಮಲಾದೇವಿಯವರು ನಿಮ್ಮ ಖಾಸಗಿ ಪತ್ರಗಳನ್ನು ಸ್ವತಂತ್ರ ಭಾರತದ 'ಶ್ರೀ. ಕೆ. ಕೆ. ಶೆಟ್ಟಿ ವಿಶೇಷಾಂಕ'ದಲ್ಲಿ ಪ್ರಕಟಿಸಬೇಕೆ? "ಕಾಲಂ ಕಷ್ಟಂ, ಕಷ್ಟಂ!" "ಶ್ರೀ. ಕಮಲಾದೇವಿ ಮತ್ತು ಶ್ರೀ. ಮಲ್ಯರ ನಿಜ ವೇಷವು ಈಗ ನನಗೆ ತಿಳಿದಿರುವುದು" ಎಂದು ನೀವು ಹೇಳಿರುವಂತೆಯೇ ನಿಮ್ಮ ನಿಜ ವೇಷವು ಈಗ ಜಿಲ್ಲೆಗೆ ಖಂಡಿತವಾಗಿಯೂ ತಿಳಿದಿದೆ. ಹೇಗೂ ಇರಲಿ. ನೀವೆಲ್ಲಿರುವಿರೆಂದು ಈಗಲಾದರೂ ನಿಮಗೆ ತಿಳಿದಿರುವುದು ಸಂತೋಷದ ಸಂಗತಿ. ನಿಮ್ಮ ವಾಕ್ಯದಿಂದಲೇ ನನ್ನೀ ಪತ್ರವನ್ನು ಕೊನೆಗೊಳಿಸುತ್ತೇನೆ: "ಈ ರೀತಿ ನಡೆದರೆ ಕಾಂಗ್ರೆಸಿನ ಗತಿಯೇನೆಂದು ಜನರೇ ವಿಚಾರಿಸಿಕೊಳ್ಳಲಿ".

ಇತಿ ತಮ್ಮ
**ಗಾಳಿಯ ಕೋಳಿ ಭಗದತ್ತ.**

---



ಬ್ರಿಟಿಷರಲ್ಲಿಯೂ, ಸಹದೇವನಂತಹ ತ್ರಿಕಾಲಜ್ಞಾನಿಗಳಿದ್ದಾರಯ್ಯಾ! ವರ್ತಮಾನಕಾಲದ ವರ್ತಮಾನ ನಮಗೂ ಗೊತ್ತಿಲ್ಲ; ಭೂತಕಾಲ-ಭವಿಷತ್ಕಾಲಗಳ ವಾರ್ತೆಯನ್ನೂ ಇಬ್ಬರು ಬಿಳಿ ಜೋಯಿಸರು ಹೇಳಿ ಬಿಟ್ಟಿದ್ದಾರೆ.

ಂ ಂ ಂ

ಗತಕಾಲದ ಸತ್ಯ ಕತೆಯನ್ನು ಲೋರ್ಡ್ ಹೈಲಿ ದೊರೆಗಳು ಲಂಡನಿನ ಸೊಸ್ಯಾಟಿಯೊಂದರಲ್ಲಿ ಮಾತನಾಡುವಾಗ ಆಡಿ ಬಿಟ್ಟರು.

ಂ ಂ ಂ

ಈ ಸಾಹೇಬರು ಹಿಂದೆ ಭಾರತದಲ್ಲಿ ಸಂಯುಕ್ತ ಪ್ರಾಂತ್ಯದ ಗವರ್ನರರಾಗಿ ಇದ್ದವರು. 'ಬ್ರಿಟಿಷರು ಹಿಂದೀ ಕೃಷಿಕರನ್ನು ಯಾವ ವಿಧದಿಂದಲೂ ಸುಧಾರಿಸಲಿಲ್ಲ' ಎನ್ನುತ್ತಾರೆ ಈಗ ಕೆಲಸವಿಲ್ಲದಾಗ!

ಂ ಂ ಂ

ಆಂಗ್ಲೇಯರು ಎಲ್ಲವನ್ನೂ ಮಾತಿನಿಂದಲೇ 'ಸುಧಾರಿಸಿಕೊಂಡು' ಹೋಗುವವರು. ಹೈಲಿ ಸಾಹೇಬರು ಆ ಸುಧಾರಣೆಯ ಪದ್ಧತಿಯನ್ನೇ ಸುಧಾರಿಸಿದಂತಾಯಿತು- ಹಿಂದೀ ಕೃಷಿಕರ ಪರಿಸ್ಥಿತಿಯನ್ನಲ್ಲ!

ಂ ಂ ಂ

ಭೂತಕಾಲದ ನೆನಪನ್ನು ಹೈಲಿ ಸಾಹೇಬರು ಮಾಡಿಕೊಟ್ಟರು; ಭವಿಷತ್ಕಾಲದ ಭವಿಷ್ಯವನ್ನು ಬ್ರಿಟಿಷರ ಸಾಹತು ಸಚಿವರಾದ ಮಿ. ಮೆಕೊನಾಲ್ಡರು ಹೇಳುತ್ತಾರೆ.

'ಬ್ರಿಟಿಷ್ ಸಾಮ್ರಾಜ್ಯವು ಅಂತ್ಯಗೊಳ್ಳುವದೆನ್ನುತ್ತಾರೆ ಕೆಲವರು; ಹಾಗಾಗಬಹುದೆಂದು ನನಗೂ ತೋರುತ್ತದೆ!' ಎನ್ನುತ್ತಾರೆ ಮೆಕ್ಡೊನಾಲ್ಡ್ ಧೊರೆ!

ಂ ಂ ಂ

'ಇಂಥಾ ಅಶುಭ ಮಾತನ್ನಾಡುವವರು ಅಧಿಕಾರದಲ್ಲಿರಬಾರದು' ಎಂದು ಬ್ರಿಟಿಷ್ ಪತ್ರಿಕೆಗಳ ಟೀಕೆ.

ಂ ಂ ಂ

ರೋಗದಿಂದ ನರಳುವವನು 'ನಾನು ಸಾಯುತ್ತೇನೆ' ಎನ್ನುವದು ಮಹಾ ಅವಲಕ್ಷಣವಂತೆ. ಆದ್ದರಿಂದ ಸಾಮ್ರಾಜ್ಯಶಾಹಿಯ ಆರೈಕೆಯಲ್ಲಿರುವ ಬ್ರಿಟಿಷ್ ಪತ್ರಿಕೆಗಳು ಇಂತಹ ಉದ್ಗಾರಗಳನ್ನು ತಡೆಯುತ್ತಿವೆ!

ಂ ಂ ಂ

ಆತ್ಮವು ಸದ್ಗತಿಯನ್ನು ಹೊಂದಬೇಕಾದರೆ ಶಾಂತಿಯಿಂದ ಪ್ರಾಣ ಬಿಡಬೇಕು-ಹಂಬಲಿಸಿ, ಕೊರಗಿ ಸಾಯಬಾರದು. ಈ ವೇದಾಂತವು ಮೆಕ್ಡೊನಾಲ್ಡರಿಗೆ ಗೊತ್ತಿಲ್ಲ; ಬ್ರಿಟಿಷ್ ಪತ್ರಿಕೆಗಳಿಗೆ ಗೊತ್ತಿದೆ!

---

ನಾ. ಖೇರ್ ಮತ್ತು ನಾ. ಮುನ್ಶಿಯವರು ಆಫೀಸಿನಲ್ಲಿ ರಾತ್ರಿ ಹಗಲು ದುಡಿಯುತ್ತಿರುವದನ್ನು ಕಂಡ ಹಿಂದೀಗೃಹಸ್ಥರೊಬ್ಬರು ಮಹಾತ್ಮರಲ್ಲಿ ದೂರು ಕೊಟ್ಟಿದ್ದಾರೆ. 'ಕಾಂಗ್ರೆಸ್ ಮಂತ್ರಿಗಳು ಏನೂ ಕೆಲಸ ಮಾಡುವದಿಲ್ಲ' ಎನ್ನುವವರು ಇತ್ತ ಕಿವಿ ಕೊಡಿ!

'ನೀವು, ಅಷ್ಟು ವಿಪರೀತ ಕೆಲಸ ಮಾಡದಂತೆ ಅವರನ್ನು ತಡೆಯಬೇಕು; ಇಲ್ಲವಾದರೆ ವಾಯಿದೆಗೆ ಮೊದಲೇ ಅವರಿಬ್ಬರನ್ನೂ ಹಿಂದುಸ್ಥಾನವು ಕಳೆದುಕೊಳ್ಳಬೇಕಾಗುವದು!' ಎಂದು ಆ ಗೃಹಸ್ಥರ ಬಿನ್ನಹ.

ಂ ಂ ಂ

ಮತ್ತೊಬ್ಬರು ಮಾನ್ಯ ಖೇರರ ಆಫೀಸಿನ ಜವಾಬ್ದಾರಿ ನೌಕರರು. 'ಶ್ರೀ ಖೇರರು ತಾವಾಗಿ ವಿಶ್ರಾಂತಿ ಪಡೆಯುವದಿಲ್ಲ; ನಮ್ಮನ್ನೂ ಬಿಡುವದಿಲ್ಲ. ಮೇಜಿನ ಮೇಲೆ ಫೈಲುಗಳ ರಾಶಿ ರಾಶಿಯೇ ಬಿದ್ದಿರುತ್ತದೆ. ಅವುಗಳನ್ನೇನು ಮಾಡವದೆಂದು ನನಗೆ ತೋಚುವದಿಲ್ಲ!' ಎಂದು ಗಾಂಧಿಯವರೊಡನೆ ಅವರ ಮೊರೆ.

ಂ ಂ ಂ

ಗಾಂಧಿಯವರು ಸಾವಧಾನವಾಗಿ ಉತ್ತರ ಕೊಟ್ಟರು-'ಅವುಗಳಿಗೆ ಬೆಂಕಿ ಕೊಡಿ'!

ಂ ಂ ಂ

ಆಫೀಸುಕಟ್ಟಡದ ಜಾಗ್ರತೆ ನೋಡಿ ಕೊಂಡಲ್ಲಿ ಬೇರಾವ ನಷ್ಟವೂ ಆ ಬೆಂಕಿಯಿಂದ ಸಂಭವಿಸಲಾರದು!

ಂ ಂ ಂ

'ಕಾಂಗ್ರೆಸ್ ಮಂತ್ರಿಗಳಲ್ಲವೆ!' ಎಂದು ಬರೆಯಬಲ್ಲವರೆಲ್ಲಾ ಬರೆದು ಹಾಕಿದ ಪತ್ರಗಳ ರಾಶಿಯಾಗಿರಬೇಕದು!

---

'ಕಾಂಗ್ರೆಸ್ ಸಂಸ್ಥೆಯಲ್ಲಿರುವ ಠಕ್ಕು ಮೆಂಬರರಿಂದ ಸಂಸ್ಥೆಯು ದುರ್ಬಲವಾಗುತ್ತದೆ. ಅಂಥವರನ್ನು ಹೊರಡಿಸಬೇಕು' ಎಂದು ವರ್ಕಿಂಗ್ ಕಮಿಟಿಯ ನಿರ್ಣಯ.

ಂ ಂ ಂ

ಈ ಠಕ್ಕು ಮೆಂಬರನ್ನು ಹೆಕ್ಕಿ ತೆಗೆಯುವ ಬಗೆ ಹೇಗೆ? ಠಕ್ಕರೆಂದಾದ ಮೇಲೆ 'ತಾವು ಠಕ್ಕರಲ್ಲ' ಎಂಬುದನ್ನು ತೋರಿಸುವ ಠಕ್ಕುತನ ಅವರಿಗೆ ಗೊತ್ತಿಲ್ಲದೆ ಹೋದೀತೆ?

—ದೂಮು

---



# ತೆರೆಯ ಮರೆಯಲ್ಲಿ



**ಶ್ರೀ. ಯಸ್. ಡಿ. ಯನ್**
**ವಿದ್ಯಾರ್ಥಿ, ತುಮಕೂರು.**

ಇಂತಹ ಪ್ರಶ್ನೆಗಳನ್ನು ಕೇಳುವ ಮನೋವೃತ್ತಿಯು ಬೆಳೆಯುತ್ತಾ ಬಂದರೆ ನಿಮ್ಮನ್ನು ನಿಜವಾಗಿಯೂ ಹುಚ್ಚರ ಆಸ್ಪತ್ರೆಗೆ ಕಳುಹಿಸಿಕೊಡಬೇಕಾದೀತು. ಪ್ರಾಯಶಃ ಈಗಲೇ ನಿಮಗೆ ಬುದ್ಧಿ ಭ್ರಮಣವಾಗಿರಲು ಪ್ರಾರಂಭಿಸಿರಬಹುದು. ವೈದ್ಯರಲ್ಲಿಗೆ ಬೇಗನೆ ಹೋಗಿ ನಿಜಸ್ಥಿತಿಯನ್ನು ತಿಳಿದುಕೊಳ್ಳಿರಿ!

ooo

**ಶ್ರೀ. ಆರ್. ಐ. ಆನೇಕಲ್.**

ಬರೆದದ್ದೆಲ್ಲಾ ಒಳ್ಳೆಯದೆನಿಸುವುದಿಲ್ಲ. ಒಂದು ವೇಳೆ ಒಳ್ಳೆಯದಾಗುತ್ತಿದ್ದರೆ ವಿಶ್ವವು ಸಾಹಿತ್ಯಮಯವಾಗುತಿತ್ತು. ನಿಮಗೆ ನೊಬೆಲ್ ಸಾಹಿತ್ಯ ಬಹುಮಾನವು ದೊರಕುತ್ತಿತ್ತು.ಅದಂತಿರಲಿ. ನೀವು ಕಳುಹಿಸಿರುವ 'ವಿನೋದ' ಗಳನ್ನು ವಿನೋದ ಲಹರಿಯೆಂದು ಕರೆದಿರುವುದೇ ಒಂದು ವಿನೋದವಾಗಿದೆ. ದಯವಿಟ್ಟು ಲೇಖನಗಳನ್ನು ಕಳುಹಿಸುವ ಮೊದಲೊಮ್ಮೆ ಓದಿನೋಡುವ ಅಭ್ಯಾಸಮಾಡಿರಿ.

ooo

**ಶ್ರೀ. ಕೆ. ಯಸ್. ಆರ್,**
**ಗುಂಡಿಬೈಲು ಉಡುಪಿ**

ಇತರರ ಪರಿಚಯ ಮಾಡಿಕೊಟ್ಟರೆ ನಿಮಗೆ ಮತ್ಸರವಾಗಬೇಕೇಕೆ? ನಿಮ್ಮಂಥವರು 'ಹೊಸ ಪರಿಯವು'ಗಳನ್ನೇ ಬಯಸುವಾಗ ನಾನು "ಹಳೆ ಪರಿ"ಯನ್ನು ಬಿಟ್ಟು "ಹೊಸಪರಿ"ಯನ್ನು ಅನುಸರಿಸಿರುವುದರಲ್ಲಿ ಆಶ್ಚರ್ಯವಿದೆಯೆ? ಅದು ಹೇಗೂ ಇರಲಿ. ನೀವು ಅವರಾಗಿ, ಅವರಂತೆಯೇ ಏನನ್ನಾದರೂ ಪ್ರಕಟನೆಗೆ ಕೊಟ್ಟರೆ ನಿಮ್ಮ ಪರಿಚಯವನ್ನು "ಹೊಸ ಪರಿ"ಯಲ್ಲಿಯೇ ಮಾಡೋಣ.

---

**LEAGAL NOTICE.**

**ಉಡ್ಪಿ ಡಿಸ್ಟ್ರಿಕ್ಟ್ ಮುನ್ಸಿಫ್ ಕೋರ್ಟಿನಲ್ಲಿ**

O. P. No. 53/1938

ಮಹಾಲಕ್ಷ್ಮಿ ಅಮ್ಮ ಸೀತಾರಾಮ ಭಟ್ರ ವಿಧವೆ, ಉಡ್ಪಿ ತಾಲೂಕು ಕುರ್ಕಾಲು ಗ್ರಾಮದಲ್ಲಿ ಬಿಳಿಯಾರಲ್ಲಿರವವಳು } ಅರ್ಜಿದಾರಳು.

ಮತ್ತು

1. ಗೋಪಾಲ ಭಟ್ಟ
2. ನಾರಾಯಣ ಭಟ್ಟ } ಶ್ರೀನಿವಾಸ ಭಟ್ರಮಕ್ಕಳು
3. ನಾಗವೇಣಿ ಅಮ್ಮ, ಶ್ರೀನಿವಾಸ ಭಟ್ರವಿಧವೆ— ಉಡ್ಪಿ ತಾಲೂಕು ಇನ್ನಂಜೆಗ್ರಾಮದ ಜಾಲಕಂಡ ಎಂಬಲ್ಲಿರುವವರು ... ... ... ... } ಎದ್ರಿರು.

ಇವರೊಳಗೆ

ಸದರೀ ಎದ್ರಿರಿಗೂ ವ ಇತರ ಎಲ್ಲಾ ಜನರಿಗೂ ಈ ಮೂಲಕ ಬಹಿರಂಗವಾಗಿ ತಿಳಿಯಪಡಿಸುವದೇನೆಂದ್ರೆ:—

ಅರ್ಜಿದಾರಳ ಗಂಡ ಹಾಲಿ ಮೃತಪಟ್ಟ ಸೀತಾರಾಮ ಭಟ್ರು The Oriental Govt. Security Life Assurance Co., Ltd. ನಲ್ಲಿ ಪಡೆದ ನಂಬ್ರ 581766ನೇ ಪೊಲಿಸಿ ಬಾಬ್ತು ಬರತಕ್ಕ ರೂ. 511—4—0 ಮತ್ತು ಸದರೀ ಸೀತಾರಾಮ ಭಟ್ರೀಗೆ ಅಚ್ಯುತ ಭಟ್ರು ತಾ. 23-6-37ರಲ್ಲು ಬರಕೊಟ್ಟ ಡಿ. ನೋಟಿನ ಬಾಬ್ತು ಬಹಾ ರೂಪ್ಯಾ 280/- ವ ಇನ್ನಂಜೆ ದಾಸಾಚಾರ್ಯರಿಂದ ಕುರಿಫಂಡಿನ ಬಾಬ್ತು ಸದ್ರಿ ಸೀತಾರಾಮ ಭಟ್ರೀಗೆ ಬಹಾ ರೂಪ್ಯಾ 50—4—4 ವ ಗೋಕಾಕ ಪೋಸ್ಟಾಫೀಸು ಸೇವಿಂಗ್ಸ್ ಬ್ಯಾಂಕ್ ಎಕೌಂಟ್ ನಂಬ್ರ 96567ಕ್ಕೆ ಸದ್ರಿ ಸೀತಾರಾಮ ಭಟ್ರು ಡಿಪೋಜಿಟು ಯಿಟ್ಟ ರೂಪ್ಯಾ 50/-ನ್ನು ಸಹಾ ಮುಂದಿನ ಬಡ್ಡಿ ಸಮೇತವಸೂಲು ಪಡೆಯುವರೆ ತಾನು ಹಕ್ಕುದಾರಳೆಂತ್ಲೂ ಆ ಕುರಿತು ತನಗೆ ಸಕ್ಸೇಶನ್ ಸರ್ಟಿಫಿಕೇಟು ಕೊಡ್ಸ ಬೇಕಾಗಿ ಅರ್ಜಿದಾರಳು ಅರ್ಜಿಕೊಟ್ಟಿರುವುದರಿಂದ ಆ ಕುರಿತು ಆಕ್ಷೇಪ ಹೇಳತಕ್ಕವರು ಅರ್ಜಿ ತನ್ಕಿ ತಾರೀಕು 9-1-1939ನೇ ದಿವ್ಸ ಹಗಲು 10ಗಂಟೆಯ ಸಮಯ ಸದ್ರೀ ಅರ್ಜಿ ತನ್ಕಿ ಕಾಲದಲ್ಲಿ ಸ್ವತಹಾ ಯಾ ವಕೀಲು ದ್ವಾರಾ ಹಾಜರಾಗಿ ಜ್ಯಾಹೀರು ಮಾಡಿಕೊಳ್ಳತಕ್ಕದ್ದು. ತಪ್ಪಿದ್ರೆ ಏಕಪಕ್ಷವಾಗಿ ತೀರ್ಮಾನಿಸಲ್ಪಡುವುದು.

ಉಡುಪಿ, ದ. ಕ.
ತಾ. 16-12-1938.

*(Sd.)* ***Lakshminarayana Aithala,***
*Vakil for Petitioner.*

# श्री प्रसाद ಶ್ರೀ ಪ್ರಸಾದ SRI PRASADA

ಸಮಗ್ರ ಭಾರತದಲ್ಲಿ ಅನೇಕ ವರ್ಷಗಳಿಂದ ಸಂಚರಿಸುತ್ತಲಿರುವ
ಮಂತ್ರವಿದ್ಯೆಯಲ್ಲಿ ಪಾರಂಗತರಾದ ತನ್ನ ಮಂತ್ರಶಕ್ತಿಯಿಂದ
ಅನೇಕ ಜನರಿಗೆ ಪ್ರಯೋಜನವನ್ನುಂಟುಮಾಡಿದ
ಯೋಗಿ ಮಹಾಶಯರೊಬ್ಬರ

# ಮಹಾಮಂತ್ರಶಕ್ತಿಯ ಪ್ರಸಾದ

ಈ ಪ್ರಸಾದಗಳ ಸೇವನೆಯಿಂದಲೂ, ಧಾರಣೆಯಿಂದಲೂ, ಪ್ರಯೋಗದಿಂದಲೂ ಅನೇಕರು ಅನೇಕ ವಿಧಗಳಿಂದ ಪ್ರಯೋಜನವನ್ನು ಹೊಂದಿರುವರು.



ಮುಖತಃ ಭೇಟಿಯನ್ನು ಇಟ್ಟುಕೊಳ್ಳಲಾಗುವುದಿಲ್ಲ.

**ಈ ಪ್ರಸಾದದಿಂದ**

*Personal interviews are prohibited.*



ಪರೀಕ್ಷೆಯಲ್ಲಿ ಪಾಸಾಗುವದು, ಶತ್ರುಗಳನ್ನು ಸ್ವಾಧೀನಪಡಿಸುವದು, ವ್ಯಾಪಾರದಲ್ಲಿ ಅಭಿವೃದ್ಧಿ ಹೊಂದುವದು, ಮುಂತಾದ ಯಾವತ್ತು ಅಭೀಷ್ಟಗಳನ್ನು ಸಾಧಿಸಬಹುದು.

**ಒಂದು ತಿಂಗಳು ಉಪಯೋಗಿಸುವ ಪ್ರಸಾದಕ್ಕೆ ರೂಪಾಯಿ ಒಂದು.**

**ವಿಶೇಷತರದ ಪ್ರಸಾದಕ್ಕೆ ರೂಪಾಯಿ ಐದು.**

**ಪ್ರಸಾದ ಬೇಕಾದವರು**– ತಮ್ಮ ನಕ್ಷತ್ರ, ಯಾ ಜನನ ಸಮಯವನ್ನೂ ತಾರೀಕನ್ನೂ ತಿಳಿಸಬೇಕು. ಅದು ಗೊತ್ತಿಲ್ಲದಿದ್ದರೆ ಕಾಗದಬರೆಯುವ ಸ್ಥಳ, ಸಮಯಗಳನ್ನೂ ನಿರ್ದೇಶಿಸಬೇಕು.

**ವಿ. ಪಿ. ಕ್ರಮವಿಲ್ಲ**–ಹಣವನ್ನು ಮುಂಗಡವಾಗಿಯೇ ಕಳುಹಿಸಬೇಕು. ಹಣವನ್ನು ಕಳುಹಿಸದೆ ಬರುವ ಕಾಗದಗಳಿಗೆ ನಿಗಾ ಕೊಡಲಾರದು.

**ಪತ್ರವ್ಯವಹಾರ:**—ಇಂಗ್ಲಿಷ್, ಸಂಸ್ಕೃತ, ಯಾ ಕನ್ನಡ ಭಾಷೆಯಲ್ಲಿ ಮಾಡಬಹುದು.

**ಎಲ್ಲ ಪತ್ರಗಳು ಗುಪ್ತವಾಗಿರಿಸಲಾಗುತ್ತವೆ.**

**C. C. No. 4.**

**C/o. ANTARANGA, UDIPI.**

# "ಅಭಿಸಾರಿಕೆ"

(ಒಂದು ಕತೆ)

●

ಈಗ ನನಗೆ ಎಲ್ಲರೂ ವ್ಯಭಿಚಾರಿ ಎನ್ನುತ್ತಾರೆ. ನನ್ನ ಮನೆಯ ಮುಂದೆ ಹಾದು ಹೋಗುವವರು ನನ್ನನ್ನು ಅದೊಂದು ದೃಷ್ಟಿಯಿಂದ ನೋಡುತ್ತಾರೆ. ಆ ದೃಷ್ಟಿ-ಆ ನೋಟ ನನ್ನ ಎದೆಯನ್ನು ಬಿರಿಯುತ್ತಿದೆ. ವಾತಾವರಣದಂತೆ ನಡೆದಿದ್ದರೆ ಹೀಗೆಲ್ಲ ಆಗುತ್ತಿತ್ತೆ ಎಂಬ ವಿಚಾರ ಉಂಟಾಗುತ್ತದೆ.

ಕತೆಗಾರರು:

ಶ್ರೀ. ತಟ್ಟಿ ಶೇಷಗಿರಿ ರಾಯರು.



ಅಂದು ಗುರುವಾರವಿತ್ತು. ಆಗ ಬೆಳಗಿನ ೯ ಘಂಟೆಯಾಗಿತ್ತು. ನಾನು ಎದ್ದು ಚಹವನ್ನು ಸಿದ್ಧ ಮಾಡಿದ್ದೆ. ಆದರೆ ಅವರು ಮಾತ್ರ ಇನ್ನೂ ಎದ್ದಿರಲಿಲ್ಲ. ನಿತ್ಯ ಹಾಸುಗೆಯ ಮೇಲೆ ಚಹವನ್ನು ಸೇವಿಸಿಕೊಂಡೇ ಅವರು ಏಳುವವರು. ಆದುದರಿಂದ ನಾನು ಚಹವನ್ನು ತೆಗೆದುಕೊಂಡು ಅವರನ್ನು ಎಬ್ಬಿಸಲು ಕೊಠಡಿಗೆ ಹೋದೆ.

'ಹೂಂ ಏಳಿರಿ. ೯ ಘಂಟೆಯಾಯಿತು' ಎಂದು ನಾನು ಅಂದೆ. ಆ ಮಾತು ಅವರಿಗೆ ಕೇಳಲಿಲ್ಲ. ಇನ್ನೂ ಅವರು ನಿದ್ದೆಯಲ್ಲಿದ್ದರು. ಮತ್ತೊಮ್ಮೆ ಹೇಳಿದೆ.

'ಏನು ಏಳುವದಿಲ್ಲೇನು ಇಂದು' ಹೂಂ ಹುಂ, ಅದಕ್ಕೂ ಅವರು ಉತ್ತರ ಕೊಡಲಿಲ್ಲ. ಹೀಗಾದರೆ ಏಳುವದಿಲ್ಲವೆಂದು ಮುಸಕನ್ನು ಕಿತ್ತು ಕೈತಟ್ಟಿ,

'ಯಾಕೆ, ಏಳುವದಿಲ್ಲವೇ' ಎಂದೆ.

ಆಗ ಮಾತ್ರ ಅವರು ಕಣ್ತೆರೆದರು. ನನ್ನನ್ನು ನೋಡಿದರು. ಆ ನೋಟ ಅಪೂರ್ವವಾಗಿತ್ತು. ಅದು ನನ್ನ ಪತಿಯ ನೋಟ-ನನ್ನ ಜೀವನ ಸರ್ವಸ್ವದ ನೋಟ-ಅದು ನನ್ನ ಮನದನ್ನನ ನೋಟ-ಆ ನೋಟದಲ್ಲಿ ಒಂದು ತೆರನಾದ ಕಾಂತಿಯಿತ್ತು-ಸೊಬಗಿತ್ತು-ನಲುಮೆಯಿತ್ತು. ಆರ್ಯಸ್ತ್ರೀಯ ಜೀವನ ಸಾರ್ಥಕತೆಯಿತ್ತು. ನನ್ನನ್ನು ನೋಡಿ ಮುಗುಳ್ನಗೆ ಬೀರಿದರು. ನನಗೂ ನಗೆ ಬಂದಿತು. ಆ ನಗೆಯೊಂದಿಗೆ ಲಜ್ಜೆ ಆವರಿಸಿತು. ಆನಂದವಾಯಿತು. ಪತಿಯ ಪ್ರೇಮ ಸಾನ್ನಿಧ್ಯ ಸಹವಾಸದಿಂದ ಯಾವ ಆರ್ಯಸ್ತ್ರೀಗೆ ಆನಂದವಾಗಲಿಕ್ಕಿಲ್ಲ.

ನಮ್ಮದು ನೂತನ ಸಂಸಾರ. ಹೊಸ ಸಂಸಾರ. ಗಂಡುಬೀರೆಯರ ಸಂಸಾರವಲ್ಲ. ನಮ್ಮದು ಆರ್ಯ ಪುರುಷಸ್ತ್ರೀ ಸಹವಾಸ. ಆ ನಮ್ಮ ಸಂಸಾರದಲ್ಲಿ ಹೊಸತನವಿತ್ತು ಸುಧಾರಣೆಯ ದುಗುಡವಿರಲಿಲ್ಲ. ಜೀವನದಲ್ಲಿ ಕ್ರಾಂತಿ ಇದ್ದರೂ, ನಮ್ಮ ಜೀವನದಲ್ಲಿ ನಾವಿನ್ಯವಿದ್ದರೂ ಶಾಂತಿ ಇದ್ದಿತು. ನಮ್ಮ ಸಂಸಾರ ಬಂಗಾರವಾಗಿದ್ದಿತು. ೨೩ ವರ್ಷದ ನಾನು-ದೇಶಪಾಂಡೆ ರಂಗರಾಯರ ಮಗಳಾದ ಸುಶೀಲೆ-ನನ್ನ ಪತಿಯೊಂದಿಗೆ ಅಚ್ಚುಕಟ್ಟಿನಿಂದ ಇರುವದನ್ನು ಕಂಡು, ನಲುಮೆಯಿಂದ ಇರುವದನ್ನು ನೋಡಿ, ಅನ್ಯರು ಹೊಟ್ಟೆ ಕಚ್ಚುತ್ತಿದ್ದರು. ಜೀವನದ ಮಾರ್ಗ ಕಂಡುಕೊಂಡವರನ್ನು ಆದರಿಸುವದು ಸ್ವಾಭಾವಿಕ

ವಾಗಿದೆ. ಅವರು F. R. O. ಕಂಪೆನಿಯಲ್ಲಿ ನೌಕರರಾಗಿದ್ದರು. ಅವರು ದೇಸಾಯಿ ಶ್ರೀನಿವಾಸರು, B. A. ಆಗಿದ್ದರು. ಅವರು ದುಡ್ಡಿಲ್ಲದವರಾಗಿದ್ದರು, ಬಡವರಾಗಿದ್ದರು, ಗುಣಿಗಳಾಗಿದ್ದರು, ಹೆಚ್ಚೇನು- ಅವರು ಮನುಷ್ಯರಾಗಿದ್ದರು.

ನಮ್ಮಿಬ್ಬರ ಗುರುತು ಬಾಲ್ಯದಿಂದ. ನಮ್ಮ ಈ ನೆರೆ, ಅವರದು ಆ ನೆರೆ. ನಮ್ಮಿಬ್ಬರಲ್ಲಿ ಪ್ರೇಮವನ್ನುಂಟು ಮಾಡಿದ್ದ ಆ ನೆರೆಯೇ ನಮ್ಮಿಬ್ಬರ ವಿವಾಹಕ್ಕೆ ಕಾರಣವಾಗಿತ್ತು. ಪ್ರೇಮಕ್ಕೆ ದುಡ್ಡು ಬೇಡ. ಪ್ರೇಮದ ನಿಜವಾದ ಕಲ್ಪನೆ ಇದ್ದುದರಿಂದ ನನ್ನ ತಂದೆಯು ನನ್ನನ್ನು ಅವರಿಗೆ ದೇಸಾಯಿ ಶ್ರೀನಿವಾಸರಿಗೆ ಧಾರೆಯೆರೆದು ಕೊಟ್ಟಿದ್ದ. ಲಗ್ನವಾಗುತ್ತಲೇ ಅವರಿಗೆ ಕೆಲಸ ಸಿಕ್ಕಿತು.

ನಾವಿಬ್ಬರು ಅವರ ಕೆಲಸದ ಊರಿಗೆ ಬಂದು ನೆಲಸಿದೆವು. ಇದೀಗ ನಮ್ಮದು ಮೊದಲೇ ಹೇಳಿದಂತೆ, ನೂತನವಾಗಿತ್ತು ಜೀವನ. ಲಗ್ನವಾಗಿ ನಾಲ್ಕು ವರ್ಷವಾಗಿದ್ದರೂ ನಮ್ಮ ಸಂಸಾರವು ನೂತನವಾಗಿತ್ತು. ೨ ವರ್ಷದ ಮಗುವೊಂದು ಇದ್ದರೂ ನಮ್ಮ ಸಂಸಾರ ನೂತನವಾಗಿತ್ತು. ತಂದೆ ತಾಯಿಗಳನ್ನು ಕಳಕೊಂಡಿದ್ದರೂ ನಾವು ಹೊಸಬರು ಜೀವನ ಮಾರ್ಗಕ್ಕೆ- ಜಗತ್ತಿಗೆ. ೨೩ ವರ್ಷ ನನಗೆ ೨೫ ವರ್ಷ ಅವರಿಗೆ. ಯಾವ ಚಿಂತೆ ಯಾವ ಯಾತನೆಯೂ ಇಲ್ಲದ್ದರಿಂದ ನಾವು 'ಆರಾಮಾಗಿದ್ದೆವು'.

ನಾನು ಲಜ್ಜೆಯಿಂದ ಕೆಳಮುಖ ಮಾಡಲು, ಅವರು-

'ಏನು ೯ ಘಂಟೆಯಾಯಿತೇ' ಎಂದು ಕೇಳಿದರು.

'ಅಹುದು'

'ಛೆ ಛೆ ಇಷ್ಟು ಬೇಗನೇ ೯ ಹೊಡೆಯುವದೇ, ಶಕ್ಯವಿಲ್ಲ.'

'ಶಕ್ಯವಿಲ್ಲವೇ ಇದೇನು' ಎಂದು ಟೇಬಲ್ಲಿನ ಮೇಲಿನ ಗಡಿಯಾರವನ್ನು ಅವರ ಮುಂದೆ ಹಿಡಿದೆ. 'ಅಹುದಲ್ಲ ನಿಜವಾಗಿ ೯ ಹೊಡೆಯಿತು ಆದರೂ ನನಗೇಕೊ ಈ ಗಡಿಯಾರದ ಭರವಸೆ ಹತ್ತಲೊಲ್ಲದು'.

'ಏಕೆ?'

'ಏಕೆಂದರೆ, ೯ ಘಂಟೆಯಾಗಿದ್ದರೂ ಕಮಲಗಳೇಕೆ ಅರಳಿಲ್ಲ. ಸೂರ್ಯನು ಬಂದಿದ್ದರೂ ಅರವಿಂದಗಳು ಬಾಡಿರುವವೇಕೆ?'

'ಇದಕ್ಕೇ ೯ ಹೊಡೆದಿಲ್ಲವೆಂದಿರೋ, ತಿಳಿಯಿತು. ನಿತ್ಯ ಸೂರ್ಯನು ಉದಿತ ಭಾಸ್ಕರನು ಇರಲು, ಕಮಲಗಳು ಎಷ್ಟೊಂದು ಅರಳುವವು. ಅಲ್ಲ ಅಲ್ಲ, ಸದಾ ಅರಳಿದ ಕಮಲಗಳು ಕುಮುದ ವೈರಿಗೆ ತೋರಲಿಕ್ಕಿಲ್ಲ'

'ಹಾಗಾದರೆ ನಗ. ಒಮ್ಮೆ ನಿನ್ನ ನಗು, ಆ ನಿನ್ನ ಒಳ್ನಗು ನನ್ನ ಹೃದಯವನ್ನು ತಣಿಸಲಿ.'

'ಸಾಕು ಬಿಡಿ ಚೇಷ್ಟೆ, ಆ ನಿಮ್ಮ ಕಾವ್ಯಮಯ ಭಾಷೆ! ಚಹಾ ಆರುತ್ತದೆ. ಬೇಗ ತೆಗೆದು ಕುಡಿಯಿರಿ. ನನಗೆ ಅಡಿಗೆ ಮಾಡಲಿಕ್ಕೆ ಹೊತ್ತಾಗುವದಿಲ್ಲವೇ.'

'ಇದಕ್ಕಾಗಿಯೇ ನಿನ್ನನ್ನು ಮಾಡಿಕೊಂಡಿರುವದೇನು. ಅಡಿಗೆ ಕೆಲಸ, ನಿತ್ಯ ಇದೇ ರಗಳೆ ನಿನಗೆ. ಬಿಡು ಬಿಡು ಆ ಅಡಿಗೆಯ ಉಸಾಬರಿ, ಬಾ ಕುಳಿತುಕೊ.'

'ಹೂಂ ಕುಳಿತುಕೊಂಡರೆ ಅಡಿಗೆ ಮಾಡಬೇಡವೇ? ನಾವೇನು ಶ್ರೀಮಂತರೇ, ಅಡಿಗೆಯವರಿರುವರೇ, ನೀರಿನವರಿರುವರೇ?'

ಅವರಿಗೆ ನನ್ನ ಮಾತಿನ ಅರ್ಥವಾಯಿತು. ಅವರೊಂದು ದೀರ್ಘ ಶ್ವಾಸ ಎಳೆದರು.

'ಅಹುದು ನೋಡು, ದೇವರು ನಮಗೆ ಅಷ್ಟೊಂದು ಯೋಗ್ಯತೆಯನ್ನು ಕೊಡಲಾರನೇನು? ಇಲ್ಲ ಇಲ್ಲ, ಕೊಟ್ಟೇಕೊಡುವನು. ಏಕೆ. ನನಗಿರುವ ೪೦ ರೂಪಾಯಿ ಪಗಾರದಲ್ಲಿ ಅಡಿಗೆ ನೀರಿನವರನ್ನು ಇಟ್ಟುಕೊಳ್ಳಲು ಆಗದೇನು'.

'ಹೂಂ. ಅಡಿಗೆ ನೀರಿನವರನ್ನಿಟ್ಟುಕೊಂಡು ಎಲ್ಲ ರೊಕ್ಕ ಹಾಳುಮಾಡಿಕೊಂಡರೆ ನಾಳೆ 'ಆಯತ' ವೇಳೆಗೆ ಒಂದು ದುಡ್ಡು ಯಾರಾದರೂ ಕೊಡುವರೇ?'.

'ಎರಡು ಮಾತೂ ನೀನೇ ಆಡುತ್ತಿಯಲ್ಲ'?

'ನಾವು ಹೆಂಗಸರಲ್ಲವೇ' ಎಂದೆನು.

'ಅಂದರೆ ಬುದ್ಧಿ ಇಲ್ಲದವರೇನು'.

'ಇರಲಿ ಈಗದು ಬೇಡ. ಅಡಿಗೆ ನೀರಿನವರಷ್ಟು ದೂರ ಈಗಲೇ ಹೋಗುವದು ಬೇಡ. ಒಂದು ಜರದ ಪತ್ತಲ ಹೇಳಿದ್ದೆನಲ್ಲ. ತಮಗೆ ನೆನಪಿನಲ್ಲಿರುವದಷ್ಟೆ'.

'ಇದೆ'.

'ಹೇಳಿ ಎಷ್ಟು ತಿಂಗಳಾಯಿತು.'

'ನಾಲ್ಕು ತಿಂಗಳು.'

'ಒಂದು ಪತ್ತಲ ಹೇಳಿ ನಾಲ್ಕು ತಿಂಗಳಾಯಿತು. ತರಲಿಕ್ಕೆ ನಿಮಗೆ ಆಗಲಿಲ್ಲ. ಅಂತಹರು ಅಡಿಗೆ ನೀರಿನವರನ್ನು ಇಟ್ಟುಕೊಳ್ಳುವವರೋ ನೀವು?'

ಅವರಿಗೆ ನನ್ನ ಮಾತಿನಿಂದ ದಿಗಿಲುಂಟಾಯಿತು. 'ಎಂತಹ ಮನು

ಪ್ಯಳು! ಮೆತ್ತಗಾಗಿ ಒಂದು ಬಾಣ ಎಸೆದಿಯಲ್ಲ. ಇಷ್ಟೇ ತಾನೆ. ನೋಡು, ಈಗ ಪತ್ತಲ ಮೊದಲಾದವುಗಳಿಗೆ ದುಡ್ಡು ಹಾಳು ಮಾಡಿದರೆ ನಾಳೆ ಹೊತ್ತು ಬಂದಾಗ ಯಾರಾದರೂ ಕೊಡುತ್ತಾರೇನು?' ಎಂದರು.

ಮಾತಿಗೆ ಮಾತು ಸರಿಯಾದ್ದರಿಂದ ಅವರಿಗೆ ನಗೆ ಬಂದಿತು. ಅದನ್ನು ಕಂಡು ನನಗೂ ನಗೆ ಬಂದಿತು. ಇಬ್ಬರೂ ನಕ್ಕೆವು.

'ಇರಲಿ, ನಾಳೆ ದಸರೆ ಸಂತೆಗೆಲ್ಲ ಹೊಸ ಹೊಸ ಶೀರೆಯುಟ್ಟು ಕೊಂಡು ಗುಡಿಗೆ ಹೋಗುತ್ತಾರೆ. ನಾನು......?'

'ಒಳ್ಳೇದು ತರುತ್ತೇನೆ. 'ನೀನು,' ಎಂದು ಗಾಬರಿಯಾಗ ಬೇಡ.'

'ನಿಜವೇ'.

'ನಿಜವು.' ಅಷ್ಟರಲ್ಲಿ ಅಲ್ಲಿ ಮಲಗಿದ ಮಗುವು ಅಳಹತ್ತಿದ್ದರಿಂದ ನಾನು ಒಳಗೆ ಹೋದೆ. ಮನದಲ್ಲಿ ಹಿಗ್ಗು, ಅದೊಂದು ಆನಂದ. ಇಂದು ಹೊಸ ಪತ್ತಲ ಬರುವದು, ಉಟ್ಟು ಕೊಂಡು ನಾಳೆ ಗುಡಿಗೆ ಹೋಗುವೆನು. ಪಕ್ಕದವರು ಅದರ ಕ್ರಯ ಕೇಳುವರು,. ಅದರ ಸೊಬಗು ನೋಡುವರು. ಅದನ್ನು ನಾನು ಉಟ್ಟುಕೊಂಡರೆ ಅವರು ಎಷ್ಟು ಸಂತೋಷ ಪಡಬಹುದು. ನಾನದನ್ನುಟ್ಟುಕೊಂಡು ಕನ್ನಡಿಯ ಮುಂದೆ ನಿಂತರೆ ಹೇಗೆ ಕಾಣಬಹುದು?. ಬಹಳ ವೇಳೆಯ ವರೆಗೆ ಯೋಚಿಸಿದೆ. ಆ ಯೋಚನೆಯ ಭರದಲ್ಲಿ ಅವರು ಊಟಮಾಡಿಆಫೀಸಿಗೆ ಹೋಗಿ ತಿರುಗಿ ಬರುವ ವೇಳೆಯಾಯಿತು. ೫ ಘಂಟೆಯಾಯಿತು. ಇದೇ ಅವರು ನಿತ್ಯ ಬರುವ ವೇಳೆ. ಈಗ ಬರುವರು- ಎಂದು ಚಹಾಕ್ಕೆ ನೀರು ಇಟ್ಟು ಕಾಲಿಗೆ ನೀರು ತಂದಿಟ್ಟೆ. ಉಪಹಾರಕ್ಕೆ [illegible]ಣಿ ಮಾಡಿದೆ. ಘಂಟೆಯು ಹೇಗೆ ಹೇಗೆ ವೇಳೆಯನ್ನು ಹೆಚ್ಚಿಸುತ್ತಿತ್ತೊ ಹಾಗೆ ಹಾಗೆ ನನ್ನ ಆತುರವು ಹೆಚ್ಚುತ್ತ ನಡೆಯಿತು. ಆದರೆ ೫|| ಘಂಟೆಯಾದರೂ ಅವರು ಬಾರದಿರಲು ಮನವು ದಿಗಿಲುಗೊಂಡಿತು. ಹೊರಗೆ ಬಂದು ಎಷ್ಟೋ ಸಲ ಅವರು ಬರುವ ದಾರಿಯ ಕಡೆಗೆ ನೋಡಿದೆ. ಕಾಣಲಿಲ್ಲ. ಏಕೆ? ಅದೇಕೆ ಇವರು ಬಂದಿರಲಿಕ್ಕಿಲ್ಲ. ಹತ್ತಿರ ಮನೆಯ ಅವರ ಗೆಳೆಯನೊಬ್ಬನ ಹೆಂಡತಿಯನ್ನು ಕೇಳಿದೆ. ಆಕೆಯ ಗಂಡ ಅವರ ಕಚೇರಿಗೆ ಹೋಗುತ್ತಿದ್ದ. ಅವರು ಬಂದಿರುವರೆಂದೂ ನಿಮ್ಮ ಯಜಮಾನರು ಆಫೀಸಿನಿಂದ ಹೋದುದನ್ನು ಅವರು ಕಂಡರೆಂದೂ ಹೆಚ್ಚಿಗೆ ಗೊತ್ತಿಲ್ಲವೆಂದೂ ಅವಳು ತನ್ನ ಯಜಮಾನನನ್ನು ಕೇಳಿ ಹೇಳಿದಳು. ಅದನ್ನು ಕೇಳಿ ಚಿಂತೆ ಹೆಚ್ಚಾಯಿತು. ಎದೆ ಹಾರ ಹತ್ತಿತು! ಏಕೆ, ಅವರೇಕೆ ಬಂದಿರಲಿಕ್ಕಿಲ್ಲ. ಇಲ್ಲದ್ದೊಂದು ಕಲ್ಪನೆ ತಲೆಯಲ್ಲಿ ಹೋಗಿ ದೇವರಿಗೆ ಬೇಡಿಕೊಂಡೆ. ತುಪ್ಪದ ದೀವಿಗೆ ಹಚ್ಚಿಟ್ಟು ಕಾಯಿ. ಮಾಡಿಸುವೆನೆಂದು ಅಂದೆ. ಎಷ್ಟು ವೇಳೆಯಾಯಿತು. ಹಾದಿ ನೋಡಿ ನೋಡಿ ನಿರಾಶಳಾಗಿ ಕಡೆಗೆ ನಿಶೆಯು ಆವರಿಸಿದ್ದರಿಂದ

ಒಳಗೆ ಹೋಗಿ ದೀಪ ಹಚ್ಚ ಬೇಕೆನ್ನುವಷ್ಟರಲ್ಲಿ ಹೊರಗೆ ಕಾಲು ಸಪ್ಪಳವಾಯಿತು. ಭರದಿಂದ ದೀಪ ಹಚ್ಚಿದೆ. ಬಂದು ನೋಡಿದೆ, ಅಹುದು! ಅವರೇ ಬಂದಿದ್ದರು. ಆದರೆ ಅದೇನು? ಆ ಬರುವಿಕೆಯಲ್ಲಿ ಅದೊಂದು ಅಸಾಧಾರಣವಾದ ಯಾತನೆ ದೃಗ್ಗೋಚರವಾಯಿತು. ಆ ಕಾಲುಸಪ್ಪಳಗಳು ಭೀತಿಯನ್ನು ನನ್ನ ಮನಕೆ ಮುಟ್ಟಿಸಿದವು. ಏಕೆಂತ ನೋಡಿದೆ. ಮಉಖವು. ಅವರ ಮುಖವು ಬಾಡಿಹೋಗಿತ್ತು. ಚಿಂತೆಯು ತೋರುತ್ತಿತ್ತು. ಅವರು ಒಳಗೆ ಬಂದವರೇ ತಮ್ಮ ಕೊಠಡಿಯಲ್ಲಿ ಹೋಗಿ ಅಂಗಿ ಟೊಪ್ಪಿಗೆಗಳನ್ನು ಕೂಡ ತೆಗೆಯದೆ ಹಾಗೇ ಹೋಗಿ ಬಿದ್ದುಕೊಂಡು ಬಿಟ್ಟರು. ನಾನು ತ್ವರಿತದಿಂದ-

'ಏನು ಏನಾಯಿತು. ತಮಗೆ ಕಾಯಿಲೆಯೇ?' ಎಂದು ಕೇಳಿದೆ.

'ಅಹುದು ಕಾಯಿಲೆ'

'ಏನುತಲೆನೋಯುತ್ತಿದಯೇ?'.

ಇಲ್ಲ, ಅವರು ಮಾತನಾಡಲಿಲ್ಲ, ಕುರ್ಚಿಯ ಒಂದುಕೈಗೆ ಮುಖ ವಾನಿಸಿಕೊಂಡು ಕುಳಿತುಬಿಟ್ಟರು.

'ಏಕೆ ಮಾತನಾಡುವುದಿಲ್ಲವೇ'

'ದಯವಿಟ್ಟು ನನಗೆ ತೊಂದರೆ ಕೊಡಬೇಡ' ಎಂದರು. ಅದರಿಂದ ನಾನು ಗಾಬರಿಯಾದೆ. ಸುಮ್ಮನೆ ಅವರ ಬದಿಯಲ್ಲಿ ಕುಳಿತುಬಿಟ್ಟೆ ಕೂಸು ಹೊರಗೆ ಆಡುತ್ತಿತ್ತು. ಅದರ ಕಡೆಗೆ ಲಕ್ಷ್ಯಹೋಗಲಿಲ್ಲ.

ಎಷ್ಟೋವೇಳೆ ಸುಮ್ಮನೆ ಕುಳಿತು, ಆಮೇಲೆ ಅವರು ಮುಖ ಮೇಲೆ ಮಾಡಿದರು.

ದೀಪದ ಬೆಳಕಿನಲ್ಲಿ ಅವರ ಕಣ್ಣಿನಿಂದ ನೀರು-ಆ ಗಂಡಸಿನ ಕಣ್ಣಿನಿಂದ ನೀರು ಕಂಡಿತು. ಅಳುವು ದೇತಕ್ಕೆ? ನಗುವವ ಏನು ಅಳಲೇ ಬೇಕೇ? ಮುಂಜಾನೆ ನಗುತ್ತಿರುವವರು ಸಾಯಂಕಾಲ ಅಳುತ್ತಿರಬೇಕೆ?

ನಾನು ಅವರ ಕಾಲೊತ್ತತೊಡಗಿದೆ. ಕಣ್ತೆರದುದನ್ನು ಕಂಡು ಅವರ ತಲೆಯ ಮೇಲೆ ಕೈಯಾಡಿಸಿದೆ.

'ಏಕೆ ಏನಾಗಿದೆ ನಿಮಗೆ. ಏಕೆ ಮಾತನಾಡಲೊಲ್ಲಿರಿ' ಎಂದು ಪ್ರೇಮದಿಂದ ಕೇಳಿದೆ. ಆಗವರು ನನ್ನ ಕೈಯನ್ನು ಹಿಡಿದು ಹತ್ತಿರ ಕೂಡ್ರಿಸಿಕೊಂಡು 'ಸುಶೀಲಾ' ಎಂದರು.

'ಏನು?'

'ನಾವಿಷ್ಟು ಆನಂದದಿಂದ ಇದ್ದೆವಲ್ಲವೆ? ಎಷ್ಟು ಸುಖಿಗಳಾಗಿದ್ದೆವು. ಆದರೆ, ಆ ಆನಂದ, ಆ ಸುಖ ಅಲ್ಪವೇಳೆಯದೆಂದು ನಾನು ತಿಳಿದಿರಲಿಲ್ಲ. ಸುಶೀಲಾ, ನನ್ನ ಕೆಲಸಹೋಯಿತು. ಕಂಪೆನಿಯ ಅಧಿಕಾರಿಗಳು ಲೆಖ್ಖದಲ್ಲಿ ಹೆಚ್ಚುಕಡಿಮೆ ಮಾಡಿದ್ದರಿಂದ ಗಿತಾಸ ನೋಟಸುಕೊಟ್ಟು ನನ್ನನ್ನು ಕೆಲಸದಿಂದ ಕಡಿಮೆ ಮಾಡಿದರು. ಹೋದರೆ ಹೋಗಲಿ ಕೆಲಸ. ಬಾಕಿಕಡೆಗೆ ದುಡಿದುಕೊಂಡು ಇರಬೇಕೆಂದರೆ ಕಂಪೆನಿಯವರು ನನ್ನ ಮೇಲೆ ಖಟ್ಲೆಯನ್ನು ಹಾಕುವರು. ಅದರಿಂದ ನನ್ನ ಮಾನಹಾನಿಯಾಗುವುದು. ಪೋಲಿಸರು ನನ್ನನ್ನು ಹಿಡಿದುಕೊಂಡುಹೋಗುವರು. ನಾನು ಜೈಲಿಗೆ ಹೋಗಬೇಕಾಗುವುದು. ಬೇಡ, ಬೇಡ. ಸುಶೀಲ, ಇಷ್ಟಾಗುವದಕ್ಕಿಂತ....... ಎಂದು ಕೆಲವುವೇಳೆ ಸುಮ್ಮನಾದರು. ಬಳಿಕ ಮತ್ತೆ ಹೇಳಿದರು "ಇದಕ್ಕಿಂತಸಾಯುವುದೇಉತ್ತಮವಲ್ಲವೆ' 'ಏನು ನೀವು ಸಾಯುತ್ತೀರಾ? ಹಾಗಾದರೆ ನಾನೂ ಸಾಯುತ್ತೇನೆ. ಎಂದೆನು. ದುಃಖವು ಒತ್ತಿಬಂದು ಇಬ್ಬರೂ ಮನದಣಿ ಅತ್ತುಬಿಟ್ಟೆವು.

"ಸುಶೀಲಾ ಮಾನಕ್ಕಿಂತ ಮರಣವು ಶ್ರೇಷ್ಠವಲ್ಲವೇ"?

"ನಾವು ಸಾಯುವದಕ್ಕಾಗಿ ಹುಟ್ಟಿಲ್ಲ,-ಜೀವನಕ್ಕಾಗಿ ಜೀವನ ಬದಕುವದಕ್ಕಾಗಿ ಹುಟ್ಟಿದ್ದೇವೆ." ಎಷ್ಟೋ ವೇಳೆ ಸುಮ್ಮನಿದ್ದರು ಆಮೇಲೆ

'ಏನಂದಿ ಸುಶೀಲ! ನಾವು ಜಗತ್ತಿನಲ್ಲಿ ಬದುಕೋಣವೇ ಯಾವ ಆಪತ್ತುಗಳು ಬಂದರೂ ಬದುಕೋಣವೇ? ಹೂಂ! ಆಗಲಿ. ನಿನಗಾಗಿ ಬದುಕುವೆ'. ಎಂದರು.

"ಸತ್ಯವೇ" "ದೇವರಿದ್ದಾನೆ."

"ಹೋಗು ಹೋಗು, ಒಳಗೆ ಅಡಿಗೆಮಾಡು, ಹೊತ್ತಾಯಿತು, ಎಂದರು. ನನಗಾದರೂ ಅವರು ದಣಿದು ಬಂದಿರುವದು ಗೊತ್ತಿತ್ತು. ಆದ್ದರಿಂದ ಮೊದಲಿಷ್ಟು ಕಾಫಿ ಮಾಡಿಕೊಟ್ಟು ಆ ಮೇಲೆ ಅಡಿಗೆಗೆಂದು ಒಳಗೆಹೋದೆ. ಅಷ್ಟರಲ್ಲಿ ಯಾರೋ ಒಬ್ಬರು 'ಸುಶೀಲಾಬಾಯಿ ಎತ್ತ ನೋಡುತ್ತಿದ್ದಿರಿ ಹುಡಿಗಿ ನಿಮ್ಮ ಕೂಸು ಮೋಟಾರಿನಡಿಗೆ ಬೀಳುತ್ತಿತ್ತು' ಎಂದರು. ಆಗ ನನಗೆ ಎಚ್ಚರವಾಯಿತು. ಆಗಲೇ ಗಡಿಬಿಡಿಯಲ್ಲಿ ಮರೆತುಬಿಟ್ಟಿದ್ದೆ.

ಅಡಿಗೆಯು ಆಯಿತು. ಅವರು ತಮ್ಮ ಕೊಠಡಿಯಲ್ಲಿಯೇ ಕುಳಿತಿದ್ದರು. ನಾನು ಮಣೆಗಳನ್ನುಹಾಕಿ, ಎಬ್ಬಿಸಲು ಹೋದೆ. ಹೋಗುವಾಗ ಬಲಗಣ್ಣು ಹಾರಿತು. ಬಾಗಿಲಿನ ಬದಿಯ ಹಲ್ಲಿಯು ವಟಗುಟ್ಟಿತು. ಏನಿದು ಅಶುಭ ಅಹುದು

ಅಶುಭವೇ ಆಯಿತು ಕೊಠಡಿಯು. ನೇರವಾಗಿ ತೆರೆದಿಟ್ಟಿತ್ತು. ಒಳಗಿನ ದೀಪಿಗೆ ಢಾಳವಾಗಿ ಉರಿಯುತ್ತಿತ್ತು. ಅವರು ಮಂಚದ ಮೇಲೆ ಮಲಗಿದ್ದರು. ಎಬ್ಬಿಸಿದೆ. ಎಷ್ಟೋ ಸಲ ಎಬ್ಬಿಸಿದೆ, ಆ ನನ್ನ ಕರೆಯುವಿಕೆ ಅವರಿಗೆ ಕೇಳಲಿಲ್ಲ. ಆ ನನ್ನ ಕೂಗು ಅವರ ಕರ್ಣರಂಧ್ರವನ್ನು ಪ್ರವೇಶಿಸಲಿಲ್ಲ. ಇಲ್ಲ! ಇಲ್ಲ! ಅವರು ಊಗುಕೇಳದ ಅಂತಹ ನಿದ್ರೆಯಲ್ಲಿದ್ದರು. ಅದನ್ನು ಕಂಡು ನನಗೆ ಜಗತ್ತೇ ಶೂನ್ಯವಾಯಿತು. ಏನೂ ತಿಳಿಯದವಳಾಗಿ ಚಿಟ್ಟನೇ ಚೀರಿಬಿಟ್ಟೆ. ನೆರೆಯವರು ಬಂದರು.ಏನು? ಏನೆಂದು ಕೇಳಿದರು. ವಿಷಪ್ರಾಸನ ಮಾಡಿ ಮರ್ಯಾದೆಗಾಗಿ ಮರಣ ಹೊಂದಿದ್ದ ಅವರನ್ನು ಕಂಡು ನೆರೆಯವರಿಗೂ ಕಕ್ಕುಲತೆ ಮುಂಬಾಯ ಸಮಾಧಾನಪಡಿಸುವಷ್ಟು ಪಡಿಸಿದರು. ಆದರೆ ದುರ್ಮರಣವಾದ್ದುದರಿಂದ ಹೆದರಿದರು ನೆರೆಯವರು. ಪೋಲೀಸರಿಗೆ ಸುದ್ದಿಹೋಯಿತು. ಪಂಚನಾಮೆಯಾಯಿತು. ಅಂತೂ ಆ ಪ್ರಕರಣದಿಂದ ಉಳಿಯಬೇಕಾದರೆ ಸಾಕುಸಾಕಾಗಿ ಹೋಯಿತು. ಮುಂದೇನು ಮಾಡುವದು? ಸತ್ತವರಿಗಾಗಿ ಸಾಯಬೇಕೆ.-ಅಹುದುಪ್ರೇಮವಸ್ತುವನ್ನು ಕಳೆದುಕೊಂಡು ಇರಬಾರದೆಂದೇ ನನ್ನಮತ. ಆ ನನ್ನ ಮಾತು, ಆ ನನ್ನ ನಿಶ್ಚಯ, ನನ್ನ ಕಂದಮ್ಮನನ್ನು ಕಂಡು ಇಲ್ಲದಾಯಿತು. ನಾನು ಅವಳಿಗಾಗಿ ಕಾದಿದ್ದೆ. ಸತ್ತ ೮-೧೦ ದಿನಗಳ ಮೇಲೆ ಕರ್ಮಕ್ಕೆಂದು ಎಷ್ಟೋ ರೂಪಾಯಿ ಖರ್ಚಾದವು. ನಮಗಾರೂ ಇರಲಿಲ್ಲ. ನಾನೆಲ್ಲಿಗೂ ಹೋಗಬೇಕಾದುದಿಲ್ಲ.ಆದರೆಹೊಟ್ಟೆಗಾಗಿ ಏನುಗತಿ? ನಾನು ಬಹಳ ಕಲಿತಿದ್ದಿಲ್ಲ. ಕೆಲಸಮಾಡಲಿಕ್ಕೆ ಕೆಲಸವೆಂತಹವು ನನಗೆ ಸಿಗುವವು. ಸಮಾಜದ ಸುತ್ತಲಿನ ಜನರ ಸಹಾನುಭೂತಿಯಿದ್ದರೂ ಅವರು ನನಗೆ ಶುದ್ಧವಾಗಲಿಕ್ಕೆ ಹೇಳಿದರು. ನಾನು ಅವರ ಮಾತುಕೇಳಿ ಶುದ್ಧವಾದೆ. ಹೊಟ್ಟೆಗೆ ಹೊಟ್ಟೆಗೇನು ಗತಿ? ಬ್ರಾಹ್ಮಣ ಸಮಾಜದಲ್ಲಿ ಕಲಿಯದ ಹೆಣ್ಣುಮಕ್ಕಳು ಗಂಡನನ್ನು ಕಳೆದುಕೊಂಡು ಅನಾಥೆಯರಾದರೆ ಅವರಿಗೆ ಅಡಿಗೆಮಾಡದ ಹೊರತು ಬೇರೆ ಉದ್ಯೋಗವಿರಲಿಲ್ಲ. ನನಗಾದರೂ ಅದೇಬಾರಿ ಬಂದಿತು. ಆದರೆ ಇದ್ದ ಊರಲ್ಲಿ ಈ ತೆರನಾದ ಹೀನಕೆಲಸ ಮಾಡಬಾರದೆಂದು ಬೇರೆ ಊರಿಗೆ ಹೋದೆ.

ಆಲ್ಲಿಯೊಬ್ಬ ಶ್ರೀಮಂತನ ಮನೆಯಲ್ಲಿ ನನಗೆ ಅಡಿಗೆಯ ಕೆಲಸ ಹತ್ತಿತು. ಹೆಣ್ಣುಮಕ್ಕಳ ಮನೆ. ಒಳ್ಳೆಯ ಮನುಷ್ಯ,ಮೇಲೆ ಮುದುಕನಾಗಿದ್ದ. ಆದ್ದರಿಂದ ನಾನೇನು ಅಂಜುತ್ತಿರಲಿಲ್ಲ. ಇಲ್ಲದಿದ್ದರೆ ಹೆದರಬೇಕಾಗುತ್ತಿತ್ತು. ನನಗೆ. ಯಾಕೆಂದರೆ ನಾನು ಹಡೆಯದವಳು. ಕಣ್ಣುಮೂಗುಗಳಿಂದ ನೆಟ್ಟಗಿದ್ದವಳು. ಚೆಲುವೆಯರಾದ ಹೆಣ್ಣುಮಕ್ಕಳು ಗಂಡಸರಿಗೆ ಹೆದರುವದು ಸ್ವಾಭಾವಿಕ. ಆ ಚೆಲುವು ಅವರಿಗೆ ಒಪ್ಪಲೂ ಬಹುದು; ಇಲ್ಲದಿದ್ದರೆ ಜೀವನ ಕೆಡಿಸುವ ತಪ್ಪು ಆಗಬಹುದು. ನಾನು ಅವರ ಮನೆಯಲ್ಲಿದ್ದಾಗ ಅಲ್ಲಿಯೊಬ್ಬ ಗಾಂಧಿ ಟೊಪ್ಪಿಗೆಯವನು ನಿತ್ಯ ಬರುತ್ತಿದ್ದ. ಆತನು ನನಗೆ ಈ ವೃತ್ತಿ ಒಳ್ಳೆಯದಲ್ಲವೆಂದು ಹೇಳಿದ. ಆ ಮಾತು ನನಗೆ ಒಳಿತೆಂದು ತೋರಿತು. ಆದುದರಿಂದ ಇನ್ನು ನನಗೆ ವಿದ್ಯೆ ಬರಬಹುದೇ ಎಂದು ಕೇಳಿದೆ. ಬರುತ್ತದೆ- ಬರುತ್ತದೆ ಎಂದ. ಆತನ ಮಾತು ಕೇಳಿ, ನಿತ್ಯ ಆತನ ಕೂಡ ಮಾತನಾಡುವದನ್ನು ಕಂಡು ಆ ಮನೆಯವರು ನನ್ನ ಮೇಲೆ ಸಂಶಯತಿಗೆದುಕೊಂಡರು. ಎಲ್ಲೆಡೆಯಲ್ಲಿಯೂ ಗುಜುಗುಜು ನಡೆಯಿತು. ಆದ್ದರಿಂದ ಆತನಬೆನ್ನು ಹತ್ತಿ ಅನಾಥಾಶ್ರಮವನ್ನು ಸೇರಿದೆ. ಅಲ್ಲಿ ನನಗೆಮತ್ತೆ ಕೂದಲು ಬೆಳೆಸಲು ಹೇಳಿದರು. ಕುಂಕುಮ ಹಚ್ಚಿಕೊಳ್ಳಲು ಹೇಳಿದರು. ‘ಇದೇನು’ ಎಂದೆ. ಇದು ಜೀವನದ ಕ್ರಮ ಪುನರುತ್ಥಾನದ ಕಾಲ- ಎಂದು ಉಪದೇಶಮಾಡುತ್ತಿದ್ದರು. ನನ್ನ ಮಗುವಿನ ಮತ್ತು ನನ್ನ ಹೊಟ್ಟೆಬಟ್ಟೆಗಳು ಸುಸೂತ್ರವಾಗಿ ನಡೆದವು. ನನಗೆ ಕುಂಕುಮ ಹಚ್ಚುವದಾಗಲಿಲ್ಲ, ಯಾಕೆಂದರೆ ಯಾರು ಕುಂಕುಮ ಹಚ್ಚಿದ್ದರೋ ಯಾರಿಗಾಗಿ ಕುಂಕುಮ ಹಚ್ಚಿಕೊಂಡಿದ್ದೆನೋ ಅವರು ಇಲ್ಲ. ಆ ನನ್ನ ಹೃದಯ ದೇವತೆ ಇಲ್ಲ! ಇನ್ನು ಯಾರ ಸಲುವಾಗಿ? ಎಂದು ಯೋಚಿಸಿದೆ. ಆದರೆ ಕಾಲಾಂತರದಿಂದ ನನಗಾಗಿ ಮರುಗುವಆಗಾಂಧಿಟೋಪಿಯವನು ಆ ಸ್ಥಾನವನ್ನು ಆಕ್ರಮಿಸಿದ. ಅದು ಹೇಗೋ ನಾನು ಅವನಿಗೆ ಆ ಸ್ಥಳವನ್ನು ಕೊಟ್ಟೆ. ಆದ್ದರಿಂದ ಆತನೇ ನನಗೆ ಕುಂಕುಮ ಹಚ್ಚಿದ. ಹಾಗೆ ಆತನು ಕುಂಕುಮ ಹಚ್ಚುವಾಗ ನನಗೇನೋ ನೆನಪಾಯಿತು, ಮೈ ನಡುಗಿತು. ಅದಾವದೋ ಮೂರ್ತಿ ಕಣ್ಣೆದುರು ಬಂದು ‘ನೀನು ತಪ್ಪು ಮಾಡುತ್ತಿ’ ಎಂದು ಹೇಳಿದ ಹಾಗಾಯಿತು. ಇಲ್ಲ ಇಲ್ಲ, ನಾನು ತಪ್ಪು ಮಾಡುವದಿಲ್ಲ. ಅಡಿಗೇಮಾಡುವ ಹೊರೆಗಿಂತ ಪವಿತ್ರ ಕೆಲಸ ಮಾಡುತ್ತಿರುವೆನು ಸನ್ಮಾನ್ಯಳಾಗಿರು.

ವೆನು' ಎಂದು ನನ್ನ ಉತ್ತರ. ಆದರೆ ವಾತಾವರಣಕ್ಕೆ ವಿರುದ್ಧವಾಗಿ ನಡೆಯದ ಆ ಅನಾಥ ಆಶ್ರಮದ ಕನ್ಯೆಯರನ್ನು ಜನರು ಹೀಯಾಳಿಸುತ್ತಿರುವದು ತಿಳಿಯಲು ನಾನು ದುಃಖಿಸಿದೆ. ಆ ಅನಾಥ ಆಶ್ರಮದಲ್ಲಿ ನನಗೆ ನೃತ್ಯ, ಗಾಯನಗಳನ್ನು ಕಲಿಸಿದರು. ಆದರಲ್ಲಿ ನನ್ನ ಹೆಸರು ಬಹಳವಾಯಿತು. ಹಾಯ್! ಎಂಥವನ ಹೆಂಡತಿ-ಏನಾದಳೆಂದು ಒಂದು ದಿನ ಯಾರೋ ಅಂದರು. ಆಗ ನಾನು ನೃತ್ಯದಿಂದ ಹಿಂತಿರುಗಿ ಬರುತ್ತಿದ್ದೆ. ರಾತ್ರೆ ಎಂಟುಗಂಟೆಯಾಗಿತ್ತು. ತಿರುಗಿನೋಡಿದೆ. ಒಬ್ಬ ಗೃಹಸ್ಥನು ನನ್ನ ಬೆನ್ನಹಿಂದಿನಿಂದ ಬರುತ್ತಿದ್ದನು. 'ಎಂಥವಳಾದರೂ ಶೀಲ ಮಾರಿಕೊಂಡಿಲ್ಲ' ಎಂದು ಅವನಿಗೆ ಉತ್ತರಕೊಟ್ಟೆ.

ನಾನು ನೃತ್ಯದಲ್ಲಿ ಪಾರಂಗತಳಾಗಿ ಹೆಸರುವಾಸಿಯಾದುದು ಆ ಗಾಂಧಿಟೊಪ್ಪಿಗೆಯವನ ಮನಸ್ಸಿಗೆ ಬರಲಿಲ್ಲ. ಅದಕ್ಕಾಗಿ ಆತನು ನನಗೆ 'ಅಭಿಸಾರಿಕೆ' ಎಂದನು. 'ಏನು ನಾನು ಅಭಿಸಾರಿಕೆಯೇ? ಇಲ್ಲ ಇಲ್ಲ, ನಾನು ಕುಲೀನಳು' ಎಂದುಕೊಂಡೆ. ನನಗಾಗಿ ಎಷ್ಟು ಜನರು ಮಾನ್ಯಕೊಡುವರು-ಆದರೆ ನಾನು ಅಭಿಸಾರಿಕೆ. ವಯಸ್ಸಾದಂತೆ ಕಲೆಯು ತೀರಿತು. ಜನತೆಯಿಂದ ನಾನೀಗ ದೂರವಾದೆ. ನನ್ನಲ್ಲಿ ಮೊದಲಿನ ರೂಪವಿಲ್ಲ-ಆ ತೇಜವಿಲ್ಲ-ಯಾರೂ ನನ್ನ ಹತ್ತಿರ ಬರುವದಿಲ್ಲ. ನಾನು ನನ್ನ ಮನೆಯಲ್ಲಿ ೮-೧೦ ದಿನಗಳಿಂದ ಕುಳಿತಿದ್ದೆ. ನನ್ನ ಕಂದಮ್ಮ ಇದೀಗ ಬೆಳೆದು ದೊಡ್ಡವಳಾಗಿರುವಳು. ಅವಳು ನನ್ನ ಬಳಿಯಲ್ಲಿಲ್ಲ. ಅವಳ ಆಪ್ತನೊಬ್ಬನು ನಾನು ನೃತ್ಯಾಂಗನೆಯಾದುದರಿಂದ ಕರೆದುಕೊಂಡುಹೋಗಿ ಬಿಟ್ಟಿರುವನು. ಯೋಚಿಸುತ್ತಿದ್ದೆ. ಹೊಟ್ಟೆ ಬಟ್ಟೆಗಾಗಿ ಈಗ ಏನು ಮಾಡಬೇಕು. ಕಲೆಯ ಆರಾಧಕಳಾದೆ. ನೂರಾರು ರೂಪಾಯಿ ಗಳಿಸಿದೆ, ಹಾಳು ಮಾಡಿದೆ. ಇಂದು? ಹಾಯ್ ಇಂದು ಒಂದು ದುಡ್ಡು ಕೂಡ ಇಲ್ಲವಲ್ಲ. ಯೋಚಿಸುತ್ತಿದ್ದಂತೆ ಸಂಜೆಯಾಯಿತು. ಎದುರಿನ ಮಂದಿರಕ್ಕೆ ಹೋದೆ. ದೇವರೆದುರು ಕುಳಿತು ಯೋಚಿಸಿದೆ.

ಹೊಟ್ಟೆಗಾಗಿ! ಅಷ್ಟರಲ್ಲಿ ಹಿಂದಿನಿಂದ ಯಾರೋ ಬಂದರು. 'ಯಾರು?' ಆವರಿಸಿರುವ ನಿಶಿಯಲ್ಲಿ ಅವರ ಮೋರೆ ಕಾಣಲಿಲ್ಲ, ಕೇಳಿದೆ.

'ಹಾಯ್. ಎಂಥವನ ಹೆಂಡತಿ ಏನಾದಳಲ್ಲ' ಎಂದರು. ತಿರುಗಿ ನೋಡಿದೆ, ಅಂದಿನ ಆ ಗ್ರಹಸ್ಥನಾಗಿದ್ದನು. ಆತನು ಆಗ ವಯಸ್ಕನಾಗಿದ್ದನು. ಅಂದು ನನ್ನ ನೃತ್ಯವನ್ನು ಮನದಣಿ ನೋಡಿದ್ದನು. 'ನಿಮಗೆ ಮರುಕಉಂಟಾಗಿದ್ದರೆ ರೂಪಾಯಿ ಕೊಡಿ.'

ಆ ಮಿನಿಮಿನಿ ಮಿನುಗುವ ದೀಪದಲ್ಲಿ ನನ್ನ ಮೋರೆಯನ್ನು ನೋಡಿ ಕೇಳಿದ 'ಎಷ್ಟು' '೧೦ ರೂಪಾಯಿ'

ಆತನು ನೋಟನ್ನು ನನ್ನ ಕೈಯಲ್ಲಿಟ್ಟ. ಅಷ್ಟುಹೊತ್ತಿಗೆ ದೇವ ಎದುರಿನ ದೀವಿಗೆ ಪ್ರಚಂಡ ಗಾಳಿಯಿಂದ ನಂದಿಹೋಯಿತು. ಗರ್ಭಗುಡಿಯ ಎರಡೂ ಫಡಕುಗಳು ಹಾಕಿಬಿಟ್ಟವು........

.......ಮುಂದೆ ನಾನು ಹೊರಗೆ ಬರುತ್ತಲೇ 'ಅಭಿಸಾರಿಕೆ' ಎಂದು ಯಾರೋ ಅಂದರು. ಯಾರು? ಆ ಗಾಂಧಿಟೊಪ್ಪಿಯವನು! ಆತನನ್ನು ಕಂಡು 'ನೀನೇ ಹಾಗೆ ಮಾಡಿಸಿದಿ' ಎಂದೆ. ಜೀವನದ ಉದ್ಧಾರದ ಮಾರ್ಗ ಸೂಚಿಸಿದೆ ಆದರೆ ನೀನು ಅಭಿಸಾರಿಕೆಯಾಗಲು ಹೇಳಿರಲಿಲ್ಲ ಎಂದನು.

'ಹಾಗಾರೆ ನನ್ನ ಹೊಟ್ಟೆ ನನ್ನ ಬಟ್ಟೆಗೆ ಗತಿಯೇನು?' ಆತನು ಶಾಂತಿಯ ಮಾರ್ಗ' ಎಂದು ಹೇಳಿ ಹೊರಟುಹೋದನು.

೦೦ ೦೦ ೦೦

ಈಗ ನನಗೆ ಎಲ್ಲರೂ ವ್ಯಭಿಚಾರಿ ಎನ್ನುತ್ತಾರೆ. ನನ್ನ ಮನೆಯ ಮುಂದೆ ಹಾದುಹೋಗುವಾಗ ಅದೊಂದು ದೃಷ್ಟಿಯಿಂದ ನನ್ನನ್ನು ನೋಡುತ್ತಾರೆ. ಆ ದೃಷ್ಟಿ ಆ ನೋಟ ನನ್ನ ಎದೆಯನ್ನು ಬಿರಿಯುತ್ತದೆ. ಮಾನವನ್ನು ಕೊರಗಿಸುತ್ತದೆ. ವಾತಾವರಣದಂತೆ ನಡೆಯದಿದ್ದರೆ....? ಹೀಗೆಲ್ಲಾ ಆಗುತ್ತಿತ್ತು ಎಂಬ ವಿಚಾರ ಉಂಟಾಗುತ್ತದೆ.

---

## ವಾಲ್ಟರ್ ಡಿಸ್ನಿಯವರ ಜೀವಮಾನದ ಕಥೆ

(೯ನೆ ಪುಟದಿಂದ)

ನಾಲ್ಕು ವಾರಗಳಿಗೆ ಒಂದು ವ್ಯಂಗ್ಯ ಚಲಚಿತ್ರದಂತೆ ತಯಾರಿಸುತ್ತಿರುವನು.

ㅇㅇ ㅇㅇ

### ಫಿಲ್ಮು ತಯಾರಿಯ ಕಾರ್ಯಕ್ರಮವು.

ಈ ಚಲನಚಿತ್ರಗಳನ್ನು ತೆಗೆಯುವುದರಲ್ಲಿ ಇವನ ಮೊಟ್ಟಮೊದಲನೆಯ ಕೆಲಸವು ಕಥಾಕಲ್ಪನೆಯಾಗಿದೆ. ಇದಕ್ಕಾಗಿ ಆತನು ತನ್ನ ಕಲಾಕೋವಿದರನ್ನು ಸೇರಿಸಿ, ಯಾವ ಕಥೆಯನ್ನು ರಚಿಸಿದಲ್ಲಿ ಉತ್ತಮ ಭಾವೋದಯವಾಗುವುದೊ ಎಂಬುದಾಗಿ ಎಲ್ಲರೊಂದಿಗೂ ಪರ್ಯಾಲೋಚಿಸುವನು. ಯಾವ ಕಥೆಯನ್ನು ಬರೆದಲ್ಲಿ ಚೆನ್ನಾಗಿರುವುದೊ ನಿರ್ಣಯಿಸುವುದು ಬಹುಕಷ್ಟ. ಏಕೆಂದರೆ ಮಿಕ್ಕಿಮೌಸ್ ಚಿತ್ರಗಳು ಮಕ್ಕಳನ್ನೂ, ದೊಡ್ಡವರನ್ನೂ, ಗಂಡಸರನ್ನೂ ಹೆಂಗಸರನ್ನೂ ಸರಿಸಮದಿಂದ ತೃಪ್ತಿಪಡಿಸಬೇಕು. ಎಲ್ಲರನ್ನೂ ಮೆಚ್ಚಿಸುವಂತೆ ಮಾಡಬೇಕಾದಲ್ಲಿ ಎಲ್ಲರಿಗೂ ಆನಂದದಾಯಕವಾಗಿರುವ ಕಥೆಯನ್ನು ರಚಿಸಬೇಕು. ಇದೆಷ್ಟು ಕಷ್ಟದಾಯಕವೆಂಬುದನ್ನು ನೀವೆ ಊಹಿಸಿರಿ.

ಸರಿಯೆ, ಎಲ್ಲರೂ ಸೇರಿ ಯಾವುದೊ ಒಂದು ಕಥೆಯನ್ನು ಸಿದ್ಧಪಡಿಸುವರು. ಆ ತರುವಾಯ ಆ ಕಥೆಯನ್ನು ಸೀನ್‌ಗಳಾಗಿ'ವಿಂಗಡಿಸುವರು. ಈ ವಿಂಗಡಿಸಿದ ಸೀನ್‌ಗಳೂ, ಕಥಾರಚನೆಯ ನಂತರ ಸಂಗೀತ ಶಾಸ್ತ್ರಜ್ಞರಿಗೆ ಕೊಡಲ್ಪಡುವುವು. ಅವರು ಇವುಗಳನ್ನು ಪರಿಶೀಲಿಸಿ ಸಂದರ್ಭಗಳಿಗೆ ಉಚಿತವಾದ ಸಂಗೀತವನ್ನು ಕಲ್ಪಿಸಿ, ಇವುಗಳೆಲ್ಲವನ್ನೂ ಸೇರಿಸಿ ಕಲಾಕೋವಿದರ ಕೈಗೆ ಕೊಡುವರು. ಅವರು ಇವುಗಳಿಗೆ ತಕ್ಕುದಾದ ಚಿತ್ರಗಳನ್ನು ಬರೆಯುವರು. ಸಾಮಾನ್ಯವಾಗಿ ಒಂದೊಂದು ಚಲನಚಿತ್ರ ವಸ್ತುವಿಗೆ (ನಾಟಕಕ್ಕೆ) ೧೨೦೦೦ ಚಿತ್ರಗಳು ಬರೆಯಲ್ಪಡಬೇಕಾಗುವುದು. ತೆಗೆಯಲ್ಪಡುವ ಫಿಲಂ ಬಣ್ಣ ಬಣ್ಣದ ಚಲನಚಿತ್ರವಾ ಬೇಕಾದಲ್ಲಿ ಚಿತ್ರಗಳು ತುಂಡುಬಣ್ಣಗಳಿಂದಲೇ ಬರೆಯಲ್ಪಡುವುವು. ಅಥವಾ ಎಂದಿನಂತೆಯೇ ಬರೆಯಬಹುದು. ಈ ಚಿತ್ರಗಳನ್ನು ಪುನಃ ಫೋಟೊ ತೆಗೆದು ಚಲನಚಿತ್ರವಾಗಿ ತಯಾರಿಸುವರು. ಈ ರೀತಿ ತಯಾರಾದ ಫಿಲಂ ಕೊನೆಗೆ ತೆರೆಯ ಮೇಲೆ ಪ್ರದರ್ಶಿಸಲ್ಪಡುವುದು.

ಅನಂತರ ಸಂಭಾಷಣೆಗಳನ್ನೂ, ಸಂಗೀತವನ್ನೂ ಚಲನಚಿತ್ರದೊಂದಿಗೆ ಸಂಬಂಧಿಸುವುದು ಹೇಗೆಂದರೆ, ಚಲನಚಿತ್ರದ ನಾಟಕದ ಪ್ರತಿಯೊಂದು ಪಾತ್ರಕ್ಕೂ ಒಬ್ಬೊಬ್ಬ ಮನುಷ್ಯನು ಇರುವನು. ತನ್ನ ಸಂಭಾಷಣೆಗಳನ್ನೂ, ಸಂಗೀತವನ್ನೂ ನಿರ್ವಹಿಸುವುದೇ ಇವನ ಕೆಲಸ. ಈ ಮೂರನ್ನೂ ಮನುಷ್ಯರ ಸಹಾಯದಿಂದ ಫಿಲಂ ಪಾತ್ರಗಳೇ ಮಾತನಾಡಿದಂತೆಯೂ, ಹಾಡಿದಂತೆಯೂ ಕುಣಿದಂತೆಯೂ ಪ್ರದರ್ಶಿಸುವಂತೆ ಮಾಡುವರು. ಸಂಗೀತವಾದ್ಯಗಳು ಕೂಡ ಒಂದು ಕಡೆ ಬಾರಿಸಲ್ಪಡುತ್ತಿರುವುವು; ಹಾಡು ಹೇಳುತ್ತಿರುವಾಗ್ಗೆ ಈ ರೀತಿಯಾಗಿ ಮಿಕ್ಕಿಮೌಸ್ ಚಿತ್ರಗಳು ಬಹು ವಿನೋದಕರವಾದ ವಿಧಾನದಲ್ಲಿ ತಯಾರಿಸಲ್ಪಡುತ್ತಿರುವುವು. ಚಿತ್ರಗಳು ಬರೆಯಲ್ಪಡುವುದೂ, ಇವುಗಳಿಂದಲೇ ವ್ಯಂಗ್ಯ ಚಲನಚಿತ್ರಗಳನ್ನು ತೆಗೆಯುವುದೂ, ಮೂಕಪ್ರಾಣಿಗಳೇ ತಾವಾಗಿ ಮಾತನಾಡುವಂತೆಯೂ, ಇತರರೊಂದಿಗೆ ಮಾತನಾಡುವಂತೆಯೂ ಈ ಬಗೆಯಾದ ವಿಧಾನಗಳು ವಾಲ್ಟ್ ಡಿಸ್ನಿಯ ಚಮತ್ಕಾರ' ಕಲಾಭಿಜ್ಞತೆಯನ್ನು ಹೊರಪಡಿಸುತ್ತಿರುವುವು.

ㅇㅇ ㅇㅇ

### ಕಾರ್ಯತತ್ಪರತೆಯ ಫಲವು.

ವಾಲ್ಟರ್ ಡಿಸ್ನೀಯು ತನ್ನ ಕುಟುಂಬದೊಂದಿಗೆ ಹಾಲೀವುಡ್ಡಿನಲ್ಲಿಯೇ ವಾಸಮಾಡುತ್ತಿರುವನು. ಈಗ ಇವನ ತಮ್ಮನು ಇವನಕಂಪೆನಿಗೆ ಪಾಲಗಾರನಾಗಿರುವನು. ವ್ಯವಹಾರ ವಿಷಯಗಳೆಲ್ಲವನ್ನೂ ಈ ತಮ್ಮನೇ ನೋಡಿಕೊಳ್ಳುತ್ತಿರುವನು ಈ ಅಣ್ಣತಮ್ಮಂದಿರಿಬ್ಬರೂ ತಮ್ಮ ಕಂಪೆನಿಯನ್ನು ಬಲವಾದ ಅಸ್ತಿವಾರದ ಮೇಲೆ ನಿಲ್ಲಿಸಲು ಬಹು ಕಷ್ಟಪಟ್ಟಿರುವರು ಒಂದು ಸಲ ವಾಲ್ಟರ್‌ನ ಆರೋಗ್ಯವು ಕೂಡಾ ಈ ಅವಿಶ್ರಾಂತ ಶ್ರಮದಿಂದ ಕೆಟ್ಟಿತು. ಆಗಿನಿಂದ ವಾಲ್ಟರನು ಜಹಳ ಜಾಗರೂಕನಾಗಿರುತ್ತಾ ಸಾಕಾದಷ್ಟು ವಿಶ್ರಾಂತಿಯನ್ನು ಪಡೆಯುತ್ತಾ ಇರುವನು.

ಎಷ್ಟೆಂದು ಹೇಳಿದರೇನು? ವಾಲ್ಟರ್ ಡಿಸ್ನೀಯು ಪ್ರಜಾಕೋಟಿಗೆ ಒಂದು ಅಪೂರ್ವವಾದ ವಿನೋದವನ್ನು ಕಲ್ಪಿಸಿದವನಾದನು. ಎಂತಹ ವ್ಯಸನದಲ್ಲಿದ್ದವರಾದರೂ

ಸರಿಯೆ, ಇವನ ಚಿತ್ರಗಳನ್ನು ನೋಡುತ್ತಲೇ ಹೊಟ್ಟೆಯುಬ್ಬಿ ನಕ್ಕು ಹಾಸ್ಯರಸದಲ್ಲಿ ತೇಲಾಡುವರು. ವಾಲ್ಟರ್ ಡಿಸ್ನಿಯು ನಿಜವಾಗಿಯೂ ಈ ವ್ಯಂಗ್ಯ ಚಲನಚಿತ್ರ ನಿರ್ಮಾಣದ ಮೂಲಕ ಯುರೋಪ್ಯ, ಅಮೇರಿಕಾ ಖಂಡವಾಸಿಗಳಿಗಲ್ಲದೆ ಭಾರತೀಯರಿಗೂ ಅಪಾರವಾದ ಚಿತ್ತವಿಶ್ರಾಂತಿಗೆ ತಕ್ಕ ಅವಕಾಶವನ್ನು ಕಲ್ಪಿಸಿವನು ಇವನ ಸಾಹಸವೂ, ಇವನ ಸಂತತವಾದ ಕಾರ್ಯದೀಕ್ಷೆಯೂ, ಶ್ರಮವೂ ಈ ಗುಣಗಳೇ ವಾಲ್ಟರ್ ಡಿಸ್ನೀಯ ಪ್ರಖ್ಯಾತಿಗೆ ಕಾರಣಭೂತಗಳಾಗಿರುವುವು.

ನಮ್ಮ ಕರ್ನಾಟಕದಲ್ಲಿ ಸೂತ್ರದ ಗೊಂಬೆಯಾಟಗಳೂ, ಚರ್ಮದ ಗೊಂಬೆ ಕುಣಿತಗಳೂ ಪೂರ್ವಕಾಲದಿಂದ ನಡೆದು ಬರುತ್ತಿರುವ ಕಲೆಗಳಾಗಿವೆ. ನಾಟಕ, ಚಲನಚಿತ್ರಗಳ ವಿಸ್ತಾರದಿಂದ ಈ ಕಲೆಯು ಶುದ್ಧಾಂಗವಾಗಿ ಅಳಿದು ಹೋಗಿದೆ. ಬೆಂಗಳೂರು ಕಲಾಮಂದಿರದ ಸುಬ್ಬರಾಯರವರು ಈ ಅಳಿದು ಹೋದ ಸೂತ್ರದ ಗೊಂಬೆಯಾಟದ ರುಚಿಯನ್ನು ವಿವಿಧ ವಿನೋದಾವಳಿಯ ಸಂಬಂಧವಾಗಿ ಈಗ್ಗೆ ೫-೬ ವರುಷಗಳ ಹಿಂದೆ ಬೆಂಗಳೂರು ನಗರದ ನಾಗರೀಕರಿಗೆ ಪ್ರದರ್ಶಿಸಿದರು. ಕರ್ನಾಟಕದಲ್ಲಿ ವಾಕ್ಚಲನ ಚಿತ್ರಗಳ ತಯಾರಿಕೆಯು ಹುಟ್ಟುತ್ತಲಿದೆ. ಚಲನಚಿತ್ರ ತಯಾರಿಕೆಯ ಸಂಸ್ಥೆಗಳು ಒಂದೊಂದಾಗಿ ಹುಟ್ಟುತ್ತಲಿರುವುವು. ವಾಲ್ಟರ್ ಡಿಸ್ನಿಯ ಕಲಾಕುಶಲತೆಯಂತೆ ಸೂತ್ರದ ಗೊಂಬೆಯಾಟಗಳ ಕಲೆಯನ್ನೂ, ಚರ್ಮದ ಗೊಂಬೆ ಆಟದ ಕಲೆಯವರನ್ನೂ ಕೇಂದ್ರೀಕರಿಸಿಕೊಂಡು ನಮ್ಮ ಸಂಸ್ಕೃತಿಗೆ ತಕ್ಕಂತೆ ಕರ್ನಾಟಕದ ಮಿಕ್ಕಿಮೌಸ್ ಚಲನ ಚಿತ್ರಗಳನ್ನು ತಯಾರಿಸುವಂತೆ ಮಾಡುವುದು ಕರ್ನಾಟಕದ ವೈಶಿಷ್ಟ್ಯತೆಯ ಪ್ರಕಾಶಕ್ಕೆ ಹೆಚ್ಚು ಉಪಯೋಗಕಾರಿಯಾಗುವುದಾಗಿದೆ. ಈ ನವನವೀನ ಭಾವನನ್ನು ಕಲಾ ಕೋವಿದರು ಮನನ ಮಾಡಬೇಕಾಗಿಯೂ, ಈ ವಿಷಯದಲ್ಲಿ ದುಡಿಯಬೇಕಾಗಿಯೂ ಕೋರುತ್ತೇವೆ.

---



## ಅಂತರಂಗದ ನಂಬ್ರ ೨ನೇ ಸ್ಪರ್ಧೆಗೆ

ಉತ್ತರಗಳನ್ನು ಕಳುಹಿಸತಕ್ಕವರು ಈ ಕೂಪನುಗಳಲ್ಲಿ ಬರೆದು ಕಳುಹಿಸತಕ್ಕದ್ದು.

[ಕವರಿನ ೩ನೇ ಪುಟ ನೋಡಿರಿ.]

**ಗೆಳೆಯರ ತಂಡದ ಮೆಂಬರರಾಗಲು ಮರೆಯಬೇಡಿರಿ.**

## ಅಂತರಂಗ ಸ್ಪರ್ಧೆ—ನಂ. ೨

ಸ್ಪರ್ಧೆಯ ಉತ್ತರಗಳನ್ನು ಈ ಕೂಪನಿನಲ್ಲಿಯೇ ಬರೆದು ಕಳುಹಿಸಬೇಕು.

ಹೆಸರು . . . . . . . . . . . . . . . . . . . . .

ವಿಳಾಸ . . . . . . . . . . . . . . . . . . . . .

. . . . . . . . . . . . . . . . . . . .

ಸಹಿ . . . . . . . . . . . . . . . . . . . . .

ಉತ್ತರಗಳ ಸಂಖ್ಯೆ. . . . . . . . . . . . . . . . . .

ಕಳುಹಿಸಿದ ಹಣವೆಷ್ಟು . . . . . . . . . . . . . . . . .

**ಗೆಳೆಯರ ತಂಡದ ಸದಸ್ಯರಾಗುವವರು ಅಂತರಂಗದ ಕೆಳಗಿನ ಕೂಪನಿನಲ್ಲಿ ಬರೆಯಬೇಕು.**

## ಗೆಳೆಯರ ತಂಡದ ಸದಸ್ಯತನದ ಪತ್ರ.

ನಾನು 'ಗೆಳೆಯರ ತಂಡ'ಕ್ಕೆ ಸೇರಬಿಚ್ಛಿಸುತ್ತೇನೆ. ಆ ಬಗ್ಗೆ ಸದಸ್ಯತನದ ಆರು ತಿಂಗಳ ವರ್ಗಣಿಯಾದ ನಾಲ್ಕಾಣೆಯನ್ನು ಕಳುಹಿಸಿರುತ್ತೇನೆ.

ಹೆಸರು. . . . . . . . . . . . . . . . . . . . . .

ವಿಳಾಸ. . . . . . . . . . . . . . . . . . . . . .

ಉದ್ಯೋಗ . . . . . . . . . . . . . . . . . . . .

ಸಹಿ. . . . . . . . . . . . . . . . . . . . . .

# ನಮ್ಮಲ್ಲಿ

## - ಕನ್ನಡ ಪುಸ್ತಕಗಳು -

| | | | | |
|---|---|---|---|---|
| ಶಾಂತಿ ಪುರಾಣ | | 3 | 0 | 0 |
| ಚಂದ್ರಗುಪ್ತ ಚಕ್ರವರ್ತಿ | | 1 | 0 | 0 |
| ಸರಸ್ವತೀ (ಸಾಮಾಜಿಕ ನಾಟಕ) | | 0 | 8 | 0 |
| ಒಂದೇ ತಿಂಗಳಲ್ಲಿ ಇಂಗ್ಲಿಷ್ (ಇಂಗ್ಲಿಷ್ ಸ್ವಯಂಬೋಧಿನಿ) | | 0 | 8 | 0 |
| ಸಾಮುದ್ರಿಕ ಶಾಸ್ತ್ರ | | 0 | 8 | 0 |
| ಹೊಂದೊವಲ ಹಂಬಲು. | | 0 | 6 | 0 |
| ವೀರಭೂಮಿ (ಕತೆ) | | 0 | 1 | 6 |
| ಗೀತೆಯ ಕೈಗನ್ನಡಿ | | 0 | 4 | 0 |
| ಗೀತೆಯ ಮೂಲ (ಈಶಾವಾಸ್ಯೋಪನಿಷತ್ತಿನ ಭಾಷಾಂತರ) | | 0 | 1 | 0 |
| ಸ್ತ್ರೀಪದ್ಯರತ್ನಾಕರ ಭಾಗ | I | 0 | 1 | 0 |
| ಡಿ | II | 0 | 1 | 0 |
| ಡಿ | III | 0 | 1 | 0 |
| ಡಿ | IV | 0 | 1 | 0 |
| ಪುರಂದರ ದಾಸರ ಪದ ಭಾಗ | I | 0 | 4 | 0 |
| ಡಿ | II | 0 | 4 | 0 |
| ಡಿ | III | 0 | 4 | 0 |
| ಮಧುವನ | | 1 | 8 | 0 |
| ಧರ್ಮಸಂಕಟ (ಸಾಮಾಜಿಕ ನಾಟಕ) | | 0 | 4 | 0 |
| Gouthama the Buddha | | 0 | 8 | 0 |
| ಭಗವದ್ಗೀತೆ | | 0 | 2 | 0 |
| ಕುಕ್ಕುಟ ಪಂಚಾಂಗ | | 0 | 1 | 0 |
| ಮಗ್ಗಿ | | 0 | 1 | 6 |
| ತುಳುನಾಡ್ ತಿಲಕ ಪಂಚಾಂಗ | | 0 | 1 | 0 |
| ವೈಜಯಂತೀ ಪಂಚಾಂಗ | | 0 | 2 | 6 |
| ಜಯಪಾಂಡ್ಯ ವಿಜಯ | | 0 | 2 | 0 |

## - ತುಳು ಪುಸ್ತಕಗಳು -

| | | | |
|---|---|---|---|
| ಕೃಷ್ಣಸಂಧಾನ (ಪ್ರಸಂಗ) (ಕನ್ನಡ ಕೃಷ್ಣಸಂಧಾನವನ್ನೊಳಗೊಂಡಿದೆ.) | 0 | 8 | 0 |
| ಬಲೀಂದ್ರ (ಕತೆ) | 0 | 2 | 0 |
| (ವಿಮರ್ಶಾತ್ಮಕ ಲೇಖನ) ಅಳಿಯ ಸಂತಾನ ಕಟ್ಟ್‌ದ ಗುಟ್ಟು | 0 | 4 | 0 |
| ಕಾನಿಗೆ (ಪದ್ಯ) | 0 | 4 | 0 |
| ತುಳುವ್ಯಾಕರಣ | 0 | 8 | 0 |
| ಜನಮರ್ಲ್ (ನಾಟಕ) | 0 | 6 | 0 |
| ಮದ್‌ಮಾಳತ್ತ್ ಮದ್‌ಮಾಯೆ. (ಕತೆ) | 0 | 2 | 0 |
| ಬಂಗಾರ್‌ದಂಗಿದ ಕತೆ. | 0 | 1 | 0 |
| ಪದ್ಯಮಾಲಿಕೆ | 0 | 1 | 0 |
| ಮಿತ್ಯನಾರಾಯಣ ಕತೆ. | 0 | 8 | 0 |
| ಸತೀ ಕಮಲೆ (ನಾವೆಲ್) | 0 | 6 | 0 |
| ಕನ್ಯೋಪದೇಶ | 0 | 2 | 0 |
| ಕನ್ನಡಕೊ | 0 | 0 | 6 |
| ವಾಲಿಸುಗ್ರೀವರ ಕಾಳಗ. | 0 | 3 | 0 |
| ಬೊಬ್ಬರ್ಯ (ಪಾಡ್ದನ) | 0 | 2 | 0 |
| ತೊಡಕಿನಾರ್ ,, | 0 | 2 | 0 |
| ಮುಂಡತ್ತಾಯ ,, | 0 | 2 | 0 |
| ವಿಶ್ವರೂಪ ದರ್ಶನ | 0 | 1 | 0 |
| (ಗೀತೆಯ II ನೇ ಅಧ್ಯಾಯದ ಪದ್ಯಾತ್ಮಕ ಭಾಷಾಂತರ) ಭಗವದ್ಗೀತೆ | 0 | 5 | 6 |

# ತುಳುನಾಡ್ ಪ್ರೆಸ್, ಉಡುಪಿ.

# ಈ ವಾರದ ಪಂಚಾಂಗ

●

ಬಹುಧಾನ್ಯ ಸಂ|ರದ ಪೌಷ ಶುಕ್ಲಪಕ್ಷ ಉತ್ತರಾಯಣಂ ಹೇಮಂತರ್ತುಃ

ಧನು ೧೦ರಿಂದ ಧನು ೧೬ರ ವರೆಗೆ. ಮಹಾನಕ್ಷತ್ರ ಮೂಲಾ. ದಶಂಬರ ೧೯೩೮

## ಆರ್ಯಭಟ ವಾಕ್ಯಕರಣರೀತ್ಯಾ ನಿತ್ಯಪಂಚಾಂಗಂ

| ತಾ. | ತಿಥಿ | ವಾರ | ನಕ್ಷತ್ರ | ಯೋಗ | ಕರಣ | ವಿಷ | ಅಮೃತ | ವಿಶೇಷಾಂಶ |
|---|---|---|---|---|---|---|---|---|
| 25 | ೪ | ರ೬೦ | ಶ್ರ೩೭\|\|\| | ಹರ್೫೨\| | ವ೩೧\| | ೪೮\|\|\| | ೯ | ಮೂ೪ರ೨೮ಶ್ತ್ರ೧ಗು ೬ಪ್ರದೋಷಃ |
| 26 | ೪ | ಚ೪ | ಧ೪೩\|\| | ವ೫೨\|\|\| | ಭ೪ | ೦ | ೧೫ | ಕುಂಭೇಚ೧೦\|\| ಸ್ವಾ೪ಕ೫೭ |
| 27 | ೫ | ಕು೮\| | ಶ್ರ೪೮\|\|\| | ಸಿ೫೩ | ಬಾ೮\| | ೩\| | ೨೯\| | ಮೃತ್ಯುಯೋಗಃ ಶತಭಿಷಾ |
| 28 | ೬ | ಬು..೨ | ಪೂಭ.೫೨\|\|\| | ವ್ಯ೫೨ | ತೈ೧೨ | ೬ | ೩⁻\|\| | ಪೂಷಾರ್ಕಃ ೪೩ಮೀನೇಚ೩೬\|\|\|ಅ೧ ಶುಂಧನುವ್ಯತೀಪಾತಯೋ. ಪ್ರದೊ. |
| 29 | ೭ | ಗು೧೪\|\| | ಉ.ಭ೫೬ | ವ೫೦\|\| | ವ೧೪\|\| | ೧೮\| | ೪೩\| | ಜೈ೩ಬು೩೦ |
| 30 | ೮ | ಶು೧೫\|\| | ರೆ೫೭\|\| | ಪ೪೭\|\|\| | ಬ೧೫\|\| | ೨೬\|\|\| | ೫೧\|\| | ಮೇಷೇಚ೫೭\|\| ಅಮೃತಸಿದ್ಧಿಯೋ. |
| 31 | ೯ | ಶ೧೫\|\| | ಅ್ವ೫೮ | ಶಿ೪೪ | ಕೌ೧೫\|\| | ೪೮ | ೪೦ | ಪೂ.ಷ೨ರ೫೮ ದಗ್ಧಯೋಗಃ೯ |

## ಕೇತಕೀ ದೃಕ್ಸಿದ್ಧರೀತ್ಯಾ ನಿತ್ಯಪಂಚಾಂಗಂ

| ತಾ. | ತಿಥಿ | ವಾರ | ನಕ್ಷತ್ರ | ಯೋಗ | ಕರಣ | ವಿಷ | ಅಮೃತ | ವಿಶೇಷಾಂಶ |
|---|---|---|---|---|---|---|---|---|
| 25 | ೪ | ರ೬೦ | ಶ್ರ೩\| | ಹರ್ ೫೩\|\|\| | ವ೩೩\| | ೫೦\|\| | ೧೪ | ಮೂ೪ರ೨೪ ಮಾರ್ಗೀಬುಧಃ |
| 26 | ೪ | ಚ೬\|\| | ಧ೪೬\|\|\| | ವ್ರ೫೫\|\|\| | ಭ೬\|\| | ೦ | ೧೭\|\| | ಕುಂಭೇಚ೧೩ |
| 27 | ೫ | ಕು೧೨\|\| | ಶ್ರ೫೩\|\| | ಸಿ೫೭\| | ಬಾ೧೨\|\| | ೬\|\|\| | ೩೩\|\| | ಸ್ವಾ೪ಕು೨೩ ಶ್ತ್ರ೧ಗು೫೨ |
| 28 | ೬ | ಬು೭\| | ಪೂ.ಭಾ೫೯\| | ವ್ಯ೫೭\|\|\| | ತೈ೧೭\|\| | ೧೧ | ೩೭\| | ಪೂರ್ವಾಷಾಢಾರ್ಕಃ೩೯\|\| ಮೀನೇಚ೪'\|\|\| ಧನುವ್ಯತಿಪಾತಃ |
| 29 | ೭ | ಗು೨೨ | ಉ.ಭಾ೬೦ | ವರಿ೫೭\|\| | ವ೨೨ | ೨೫ | ೫೦\|\|\| | |
| 30 | ೮ | ಶು೨೪\|\| | ಉ.ಭಾ೩\|\| | ಪ೫೫\|\|\| | ಬ೨೪\|\| | ೩೫ | ೦ | ಜೈ೩ಬು೫೭ ಅ೧ಶು೨೪ |
| 31 | ೯ | ಶ೨೫\| | ರೆ೬\| | ಶಿ೫೨\| | ಕೌ೨೫\| | ೫೭\| | ೪೯ | ಪೂ,ಷಾ೨ರ೫೬ ಮೇಷೇಚ |

# ಈ ವಾರದಲ್ಲಿ

# ನಿಮ್ಮ ಭವಿಷ್ಯವು ಹೇಗಿದೆ?

(ತಾ. ೨೫-೧೨-'೩೮ರಿಂದ
ತಾ. ೩೧-೧೨-'೩೮ರ ವರೆಗೆ.)

## ಮೇಷ

ನೀವು ಕೈಗೊಂಡಿರುವ ಕಾರ್ಯವನ್ನು ಕ್ರಮವಾಗಿ ಮಾಡುತ್ತಾ ಉದ್ಯೋಗಕ್ಕೆ ತಕ್ಕ ಪ್ರತಿಫಲವನ್ನು ಪಡೆಯುವಿರೆಂಬುದು ಸಂತೋಷದ ಮಾತು. ಗೃಹಕೃತ್ಯಕ್ಕೆ ಸಂಬಂಧಪಟ್ಟ ಹೆಚ್ಚಿನ ವಸ್ತುಗಳನ್ನು ಪಡೆಯುವಿರಿ. ಪುತ್ರಪ್ರಾಪ್ತಿಯ ಯೋಗವು ಕೂಡ ಕಂಡುಬರುತ್ತದೆ. ಆದರೂ ಹಣದ ಸಂಬಂಧವಾದ ವ್ಯವಹಾರದಿಂದುಂಟಾಗತಕ್ಕ ವಿರೋಧವೂ ಕಲಹಕಾರಿಣಿಯಾದ ಸಹಧರ್ಮಿಣಿಯಳ ನಡತೆಯೂ ನಿಮ್ಮ ವ್ಯಸನವನ್ನು ವೃದ್ಧಿಗೊಳಿಸುವುದು. ನೇತ್ರರೋಗ, ಶಿರೋವೇದನೆ, ಉದರರೋಗ ಇತ್ಯಾದಿ ಚಿಕ್ಕ ಚಿಕ್ಕ ರೋಗಗಳು ಮತ್ತು ಕೆಲವು ಅನಿಷ್ಟಗಳು ಸದಾ ನಿಮ್ಮನ್ನು ಪೀಡಿಸುತ್ತಿದ್ದು ಧನ ಮತ್ತು ಮಾನಸಿಕ ಸುಖಗಳನ್ನು ಅಪಹರಿಸುವವು. ತಾ. ೨೫ ರಿಂದ ೨೮ರ ವರೆಗೂ ಮತ್ತು ೩೧ ರಲ್ಲೂ ಗ್ರಹಾನುಕೂಲ್ಯವು ಚೆನ್ನಾಗಿರುವುದರಿಂದ ತದ್ದಿನಗಳಲ್ಲಿ ಮಿತ್ರಲಾಭ, ಇಷ್ಟಸಿದ್ಧಿ, ಸಂತೋಷ.

## ವೃಷಭ

ಈ ವಾರದಲ್ಲಿ ನಿಮ್ಮ ಭವಿಷ್ಯವು ಯಾವ ಭಾಗದಲ್ಲೂ ಕಳೆದ ವಾರವನ್ನು ಮಿಕ್ಕಿಹೋಗಲಾರದು. ವಾತ ಪಿತ್ಥ ಕಫಗಳೆಂಬ ತ್ರಿದೋಷಗಳು ವೃದ್ಧಿಗೊಂಡಿದ್ದು ಯಾವಾಗಲೂ ದೇಹದಲ್ಲಿ ಒಂದಲ್ಲ ಒಂದು ಪೀಡೆಯು ಇದ್ದೇ ಇರುವುದು. ಇದರಿಂದ ದೇಹದ ವರ್ಣವೂಕೂಡ ಬದಲಾಯಿಸುವುದು. ಕಳತ್ರದಲ್ಲಿ ಕಲಹವಾಗುವುದು. ಸ್ತ್ರೀಸಂಬಂಧವಾದ ಪೀಡೆಯಿಂದ ಹೆಚ್ಚಿನ ಶೋಕಕ್ಕೆ ಗುರಿಯಾಗುವಿರಿ. ಆದರೂ ನಿಮ್ಮ ಭಾಗ್ಯವು ಚೆನ್ನಾಗಿರುವುದು. ಪ್ರತಿಯೊಂದು ಕಾರ್ಯದಲ್ಲೂ ಹೆಚ್ಚಾಗಿ ಲಾಭವೇ ಆಗುವುದು. ಅಂತೂ ಖರ್ಚಿಗಿಂತ ದ್ವಿಗುಣವಾಗಿ ಆಯವಿರುವುದೆಂದು ಧಾರಾಳವಾಗಿ ಹೇಳಬಹುದು. ವಿರೋಧಿಗಳಿಗೂ ನಿಮಗೂ ಇರತಕ್ಕ ಕಲಹವು ರಾಜಿಯಾಗಿ ಪರಸ್ಪರ ಮೈತ್ರ್ಯವು ಬೆಳೆಯುವುದು. ವಾರದ ಆದ್ಯಂತ ದಿನಗಳನ್ನು ಬಿಟ್ಟು ಇತರ ದಿನಗಳಲ್ಲಿ ಕೈಗೊಂಡ ಕಾರ್ಯಗಳೂ, ಹೆಚ್ಚಿನ ಈಪ್ಸಿತಾರ್ಥಗಳೂ ಕೈಗೂಡುವವು.

## ಮಿಥುನ

ನಿಮಗನುಕೂಲರಾಗಿದ್ದ ಬುಧ ಗುರುಗಳೂ ಕೂಡ ಗ್ರಹಚಾರ ವಶಾತ್ ಪ್ರತಿಕೂಲರಾಗಿರುವರು. ಅಂತೂ ಒಟ್ಟಿನ ಮೇಲೆ ಸರ್ವಗ್ರಹರೂ ನಿಮ್ಮ ಭಾಗಕ್ಕೆ ವಿಪರೀತ ಕಾರಿಗಳೆಂದರೂ ತಪ್ಪಾಗದು. ನಿಮ್ಮ ಪ್ರಕೃತಿಯಂತೂ ಸರಿಯಾಗಿರದಷ್ಟೇ. ಅಲ್ಲದೆ ನಿಮ್ಮ ಪತ್ನೀಪುತ್ರರ ಆರೋಗ್ಯವು ಕೆಡುವ ಸಂಭವವಿದೆ. ಖರ್ಚಿನ ಭಾಗಗಳು ವಿಶೇಷವಾಗಿ ಅಭಿವೃದ್ಧಿಯಾಗುವವು. ವಿದ್ಯೆಗೂ ಕೀರ್ತಿಗೂ ಕಳಂಕಬರುವುದು. ಅಭಿವೃದ್ಧರಾದ ಶತ್ರುಗಳು ತಮ್ಮ ಕೈಲಾದಷ್ಟು ಪ್ರತೀಕಾರವನ್ನು ಮಾಡುವರು. ಪ್ರವಾಸದ ನಿಮಿತ್ತ ವಿಶೇಷ ಕಷ್ಟನಷ್ಟಗಳಿಗೆ ಈಡಾಗುವಿರಿ. ಚಂಚಲವಾದ ನಿಮ್ಮ ಚಿತ್ತವು ಯಾವ ಕಾರ್ಯವನ್ನೂ ಪೂರೈಸಲು ಬಿಡುವಂತಿಲ್ಲ. ತಾ ೨೫ರಿಂದ೨೮ರ ವರೆಗಿನ ದಿನಗಳು ವಿಶೇಷ ಹಾನಿಕಾರಕಗಳಾಗಿ ಕಂಡು ಬರುತ್ತವೆ.

## ಕರ್ಕಾಟಕ

ಕೆಲವಂಶಗಳಲ್ಲಿ ನಿಮಗೆ ಈ ವಾರವು ತಕ್ಕ ಮಟ್ಟಿಗೆ ಉತ್ತಮವಿದೆ. ಶತ್ರುಗಳನ್ನು ಸದೆಬಡಿಯುವುದರಿಂದ ಮನಸ್ಸಿಗೊಂದು ನೆಮ್ಮದಿಯಿಹುದು. ಆರೋಗ್ಯವು ಸುಧಾರಿಸಿರುವುದು. ಬಂಧು ಮಿತ್ರರು ನಿಮಗನುಕೂಲರಾಗಿರುವರು. ಆದರೆ ನಿಮಗೆ ಇತ್ತೀಚೆಗೆ ಕೆಲವು ಜನ ಮಿತ್ರರು ಗಂಟುಬಿದ್ದಿರುವರು. ಸ್ವಾಭಾವಿಕವಾಗಿ ಅವರು ಸಜ್ಜನರಾಗಿಲ್ಲ. ಇವರಿಂದ ನಿಮಗೆ ಅನಿಷ್ಟ ಅವಮಾನಗಳು ಸಂಭವಿಸಲಿವೆ. "ಸರ್ವಃ ಸಗಂಧೇಷು ವಿಶ್ವಸಿತಿ" ಎಂಬೀ ನ್ಯಾಯದಂತೆ ಪ್ರಾಯಶಃ ಎಲ್ಲರೂ ತಮ್ಮ ಗುಣ ನಡತೆ ವೃತ್ತಿಗಳಿಂದ ಸಾಧರ್ಮ್ಯವುಳ್ಳವರಲ್ಲೇ ಸ್ನೇಹವನ್ನು ಬೆಳೆಸುವರು. ಹೀಗಿರುವಾಗ ಪ್ರಕೃತದ ಪರಿಸ್ಥಿತಿಯಲ್ಲಿ

ತಮ್ಮಲ್ಲೂ ಮಿತ್ರರಲ್ಲಿನ ಗುಣದೋಷಗಳನ್ನು ಕಲ್ಪಿಸಬೇಕಾಗುತ್ತದೆ, ಪತ್ನೀಪುತ್ರರೊಳಗಿನ ವೈಷಮ್ಯವು ದುಃಖಕಾರಿಯಾಗಿ ಪರಿಣಮಿಸುವದು. ಹೃದ್ರೋಗವೊಂದು ನಿಮ್ಮನ್ನು ಸದಾ ಬಾಧಿಸುತ್ತಲೇ ಇರುವುದು. ವಾರದ ಆದ್ಯಂತ ದಿನಗಳನ್ನು ಬಿಟ್ಟು ಇತರ ದಿನಗಳು ಯಾವ ಕಾರ್ಯಕ್ಕೂ ಹೆಚ್ಚಿನ ಪ್ರಶಸ್ತವಲ್ಲವು.

## ಸಿಂಹ

ಒಳ್ಳೆಯ ಬುದ್ಧಿವಂತಿಕೆಯೂ ವಾಚಾಲತೆಯೂ ನಿಮ್ಮಲ್ಲಿ ಚೆನ್ನಾಗಿರುವುದರಿಂದ ಸಾಮಾನ್ಯ ಜನರಿಂದ ಬಿಡಿ, ಕಾಸು ಬಿಚ್ಚದ ಕಳ್ಳರಿಂದಲೂ ಕೂಡ ಹಣಕಾಸನ್ನು ಸೆಳೆಯಲು ನೀವು ಶಕ್ತರಿರುವಿರಿ ಆದರೂ ಈಗ ಕಾಲವು ಕೆಟ್ಟಿರುವುದರಿಂದ ಹಿಂದಿನಂತೆ ಅಷ್ಟೊಂದು ಸುಲಭಸಾಧ್ಯವಾಗಲಾರದು. ವ್ಯಾಪಾರಾದಿ ಉದ್ಯೋಗಗಳಲ್ಲಿ ಯೋಗ್ಯವಾದ ಪ್ರತಿಫಲ ಸಿಗುವುದು. ಪ್ರಮಾದ ವಶದಿಂದಾಗತಕ್ಕ ಕಾರ್ಯಗಳಿಂದಲೂ ಸ್ತ್ರೀ ಪುತ್ರರ ವಿಯೋಗದಿಂದಲೂ ಮನಸ್ಸು ಬಹಳ ಕಳವಳಗೊಂಡಿರುವುದು. ವಿರೋಧಿಗಳ ಉಪದ್ರವವೂ ದೇಹಾಲಸ್ಯವೂ ಸ್ವಲ್ಪಅಧಿಕವಾಗುವುದು. ಆದರೂ ಫಲಾಪೇಕ್ಷೆಯಿಲ್ಲದೆ ಸ್ವಯಂ ಯಾವ ಕಾರ್ಯವನ್ನು ಮಾಡತಕ್ಕ ಅಸಾಧಾರಣ ಶಕ್ತಿಯು ನಿಮ್ಮಲ್ಲಿರುವುದರಿಂದ ಯಾವ ಕರಕರೆಯನ್ನು ಮನಸ್ಸಿಗೆ ಹಚ್ಚಿಕೊಳ್ಳುವುದಿಲ್ಲವು. ತಾ. ೨೫ರಿಂದ೨೮ರ ವರೆಗಿನ ದಿನಗಳು ಉತ್ತಮವಿರುವುದರಿಂದ ವಾಹನಾದಿಗಳಲ್ಲಿ ಮಾನ, ಧನಗಳು ಲಭಿಸುವವು.

## ಕನ್ಯಾ

ಚಿಂತೆಯು ಮನುಷ್ಯನ ಸಕಲ ಸುಖಗಳನ್ನು ಅಪಹರಿಸುವುದು ಮಾತ್ರವಲ್ಲ, ಆತನ ಶರೀರವನ್ನೂ ಕೂಡ ಕ್ಷಯಿಸುವದು. ಈ ವಿಷಯವು ನಿಮಗೀವಾರದಲ್ಲಿ ಅನುಭವಕ್ಕೆ ಬರಲಿದೆ. ರಾಜಪೀಡೆಯಿಂದಾಗಿ ಧನವ್ಯಯವು ಅಧಿಕವಾಗುವುದು. ಅಕಸ್ಮಾತ್ ಮಾನಹಾನಿಯ ಪ್ರಸಂಗವೂ ಕೂಡ ಒದಗುವುದು. ಪಿತ್ಥವಿಶೇಷದಿಂದಾಗಿ ಅನೇಕ ದುಃಸ್ವಪ್ನಗಳೂ ಉಷ್ಣ ಪಿತ್ಥವಿಕಾರಗಳಿಂದ ದೇಹಪೀಡೆಯೂ ಸಂಭವಿಸುವದು. ಅನೇಕ ಭೋಗ್ಯ ವಸ್ತುಗಳು ನಿಮ್ಮ ಭಾಗಕ್ಕೆ ಸಿಗಲಾರವು! ಆದರೂ ಸಾಂಸಾರಿಕ ತಾಪತ್ರಯವು ನಿಮಗಿಲ್ಲವು. ನೀವು ಕೈಗೊಂಡಿರುವ ಉದ್ಯೋಗ್ಯದಲ್ಲಿ ವಿಶೇಷತಃ ಧನಲಾಭವಾಗುವುದರಿಂದ ನಿಮ್ಮ ಖರ್ಚಿಗಾಗಿ ಚಿಂತಿಸಬೇಕಿಲ್ಲವು. ಪ್ರವಾಸ ವಿಷಯದಲ್ಲಿ ಈ ವಾರವು ಎಷ್ಟರ ಮಟ್ಟಿಗೂ ಹಿತಾವಹವಲ್ಲವು. ತಾ. ೨೫ ಮತ್ತು ೩೧ ಈ ದಿನಗಳಲ್ಲಿ ಕಾರ್ಯವಿಘ್ನ, ಮಾರ್ಗಾಯಾಸ ಇತ್ಯಾದ್ಯನಿಷ್ಟಗಳು ಅಧಿಕವಾಗುವವು.

## ತುಲಾ

ಈ ವಾರದಲ್ಲಿ ಅಕಸ್ಮಾತ್ ಅವಘಡಗಳಿಗೆ ಸಿಕ್ಕಿಯಾಗಲೀ ಇತರ ವಾಹನಾದಿ ಸಂಚಾರಾದಿಗಳಲ್ಲಿಯಾಗಲೀ ನಿಮ್ಮ ಶರೀರಕ್ಕೆ ಹಾನಿಯುಂಟಾದೀತು. ಆದ ಕಾರಣ ಈ ಭಾಗದಲ್ಲಿ ಹೆಚ್ಚಿನ ಜಾಗ್ರತೆಯಿಂದ ವರ್ತಿಸತಕ್ಕದ್ದು, ಇದು ಹೊರತು ಇತರ ಎಲ್ಲಾ ಭಾಗಗಳಲ್ಲೂ ಈ ವಾರವು ಅತ್ಯಂತ ಉತ್ಕೃಷ್ಟವಿರುವುದು. ಆರೋಗ್ಯಕ್ಕೆ ಯಾವ ಭಾಗದಲ್ಲೂ ಹಾನಿಬಾರದು ಗೃಹಕೃತ್ಯದ ತೊಂದರೆಗಳೆಲ್ಲವೂ ನಿವಾರಣೆಯಾಗಿ ಯತ್ನಿಸಿದ ಕಾರ್ಯಗಳೆಲ್ಲವೂ ಕೈಗೂಡುವವು. ಸಾಂಪತ್ತಿಕ ಸ್ಥಿತಿಯು ಬಹ್ವಂಶ ಸುಧಾರಿಸುವುದು ಆದ ಕಾರಣ 'ದುಡ್ಡಿದ್ದವನೇ ದೊಡ್ಡಪ್ಪ'ಎಂಬಂತೆ ಅನೇಕ ಜನರು ನಿಮ್ಮನ್ನು ಹಿಂಬಾಲಿಸುವರು. ಶತ್ರುಗಳು ನಿಮ್ಮ ಭಾಗಕ್ಕೆ ಇಲ್ಲವೆಂದರೂ ಅತಿಶಯೋಕ್ತಿಯಾಗದು. ತಾ. ೨೯, ೩೦, ೩೧ ಈ ದಿನಗಳು ಸರ್ವೋತ್ಕೃಷ್ಟಗಳಾಗಿರುವುದರಿಂದ ಯಾವ ಕಾರ್ಯಾರಂಭಕ್ಕೂ ಯೋಗ್ಯ ಕಾಲವು.

## ವೃಶ್ಚಿಕ

ಬುದ್ಧಿಯನ್ನು ಖರ್ಚುಮಾಡಿಮಾಡತಕ್ಕ ಕಾರ್ಯಗಳಲ್ಲಿ ನಿಮಗೆ ವಿಶೇಷವಾದ ಶಕ್ತಿಯಿರುವುದು. ಅದ್ದರಿಂದ ಉಪಾಯದಿಂದಲೇ ಅನೇಕ ಕಾರ್ಯಗಳನ್ನು ಸಾಧಿಸುವಿರಿ. ಆದರೆ ಇದೊಂದು ಮಾತನ್ನು ನೆನಪಿನಲ್ಲಿಡಿರಿ. ನಿಮ್ಮ ಆಪ್ತರು ಬಂಧುಗಳು ಎಂದು ತಿಳಿದು ಅವರನ್ನು ನಂಬಿ ಅವರ ಮೇಲಿನ ವಿಶ್ವಾಸದಿಂದ ಯಾವ ಕಾರ್ಯವನ್ನೂ ಮಾಡಲು ಹವಣಿಸಬೇಡಿ, ಯಾವ ರಹಸ್ಯಗಳನ್ನೂ ಅವರೊಡನೆ ಬಿಚ್ಚದಿರಿ. ಇದಕ್ಕೆ ವಿಪರೀತವಾಗಿ ವರ್ತಿಸಿದಲ್ಲಿ ನಿಮಗೆ ಹಾನಿಯು ಸಂಭವಿಸಿಯೇ ತೀರುವುದು. ನೇತ್ರ ಸಂಬಂಧವಾದ ರೋಗವೂ ಸ್ತ್ರೀಯಿಂದ ಕೂಡಿ ಕಲಹವೂ ಆಗಲಿದೆ. ಧನವ್ಯಯವು ನಿಮ್ಮ ಆದಾಯವನ್ನು ಮಿಕ್ಕಿ ಹೋಗುವುದು. ಶತ್ರುಗಳ ಉಪಟಳದಿಂದಾಗಿ ನಿಮ್ಮ ಅನೇಕ ಕಾರ್ಯಗಳು ಅರ್ಧ

ದಲ್ಲೇ ನಿಂತುಬಿಡುವವು. ತಾ ೨೬ರಿಂದ ೩೦ರ ವರೆಗೂ ಮನಸ್ತಾಪ, ಕಲಹ ಶೋಕಗಳು ಅಧಿಕವಾಗುವವು.

## ಧನು

ಅವಯವಗಳಲ್ಲುಂಟಾಗುವ ವೇದನೆಯಿಂದ ಶರೀರಾಯಾಸವು ಅಧಿಕವಾಗುವುದು. ಹೆಚ್ಚಿನ ನಿಮ್ಮ ಸಂಪತ್ತುಗಳು ಹ್ರಾಸವಾಗಹತ್ತಿವೆ. ನಿಮ್ಮ ಇಂಗಿತವನ್ನರಿತ ಮಿತ್ರರೂ ಪತ್ನೀ ಪುತ್ರರೂ ಕೂಡ ನಿಮ್ಮಿಂದ ದೂರವಾಗುವರು. ಮನಸ್ಸು ದುರ್ಮಾರ್ಗಕ್ಕಿಳಿಯಲು ಉರಗ ಗಮನವನ್ನಾರಂಭಿಸಿರುವುದು. ಆದ್ದರಿಂದ ಮನೋನಿಗ್ರಹವನ್ನು ಅವಶ್ಯವಾಗಿ ಮಾಡಿರಿ. ನಿಮ್ಮ ಉದ್ಯೋಗದಲ್ಲಿ ಸಿಗತಕ್ಕ ಲಾಭವು ನಿಮ್ಮ ಅಪೇಕ್ಷೆಯನ್ನು ಮೀರಿರುವುದು. ಸಮಾಜ ಸೇವೆ ವಾ ಸಾರ್ವಜನಿಕ ಕಾರ್ಯಗಳಲ್ಲಿ ಜನರಿಂದ ಮಾನ ಮರ್ಯಾದೆಯನ್ನು ಪಡೆದು ಶ್ರೇಯೋಭಾಗಿಗಳಾಗುವಿರಿ. ಮಿತ್ರರ ಬೆಂಬಲವು ಬಹಳವಾಗಿರುವುದು. ಲಾಭದ ಅಧಿಕಾಂಶವು ಕೂಡಲೇ ಸತ್ಕ್ರಿಯಾನ ಧರ್ಮ ರೂಪದಲ್ಲಿ ವ್ಯಯವಾಗುವುದು. ಶತ್ರುಗಳು ನಿಮ್ಮ ಮಾನಸಿಕನುಭಾವ ಹಾರಿಗಳಾಗುವರು. ತಾ. ೨೫ ಮತ್ತು ೨೯, ೩೦, ೩೧ ಈ ದಿನಗಳಲ್ಲಿ ಧನವ್ಯಯ, ಕಾರ್ಯಹಾನಿ, ಮಾರ್ಗಾಯಾಸ, ಕಲಹಗಳು ಸಂಭವಿಸುವವು.

## ಮಕರ

“ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ ಸ್ವನುಷ್ಠಿತಾತ್ ಸ್ವಧರ್ಮೋ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ” ಎಂದು ಗೀತೆಯಲ್ಲಿ ಉಪದೇಶಿಸಿರುವನು ಆದಕಾರಣ ಸ್ವಧರ್ಮಾವಲಂಬಿಗಳಾಗಿದ್ದು ಸತ್ಕ್ರಿಯಾಕಾರಿಗಳಾದ ನಿಮಗೆ ಈ ವಾರವು ಎಲ್ಲಾ ವಿಧದಲ್ಲಿಯೂ ಉತ್ತಮವಾಗಿರುವುದು. ಗೃಹಕೃತ್ಯಕ್ಕೆ ಸಂಬಂಧಿಸಿದ ಪಶ್ವಾದಿ ಸಕಲ ಪರಿವಾರಗಳಲ್ಲೂ ನಿಮಗೆ ಕೊರತೆಯಿಲ್ಲವು. ಮಿತ್ರಜನರಿಂದಾಗಿ ಧನಲಾಭವಾಗುವುದು. ವ್ಯಾಪಾರ ವ್ಯವಹಾರ ಇತ್ಯಾದಿಗಳಲ್ಲಿ ನಿಮ್ಮ ಪಂಥವೇ ಮೇಲಾಗಿರುವುದು. ವನಿತಾ ಸುಖವು ಸಂಪೂರ್ಣವಾಗಿರುವುದು. ಶತ್ರುಗಳೆಂಬ ಗಜ ಸಮೂಹಕ್ಕೆ ಕಂಠೀರವ ಪ್ರಾಯರಾಗಿರುವಿರಿ. ದುವೃತ್ತರಿಗೆ ಶತ್ರುಗಳಿಂದ ಪರಾಜಯವೂ ತನುಮಾನಸ ಪೀಡೆಯೂ, ಹೆಚ್ಚಿನ ಧನವ್ಯಯವೂ ಕೂಡ ಆಗುವುದು. ತಾ. ೨೫ ೨೯ ೩೦ ಈ ದಿನಗಳು ಉತ್ತಮಗಳಾಗಿವೆ.

## ಕುಂಭ

ಶ್ರಮಕ್ಕೆ ತಕ್ಕ ಪ್ರತಿಫಲ ದೊರೆಯುವುದು. ಹಿಡಿದ ಕಾರ್ಯವನ್ನು ಪೂರ್ತಿಗೊಳಿಸಿ ವಿಜಯಿಗಳೆಂದೆನ್ನಿಸಿಕೊಳ್ಳುವಿರಿ. ಸ್ಥಾನಮಾನಾದಿಗಳು ದೊರೆಯುವುವು. ನಿವಾಹಿತರಿಗೆ ಶಯ್ಯಾಸುಖಕ್ಕೇನೂ ಕೊರತೆಯುಂಟಾಗದು. ಆರೋಗ್ಯದ ಮಟ್ಟಿಗೆ ಹೆಚ್ಚಿನ ಉತ್ಕೃಷ್ಟವಾಗಿಲ್ಲವು. ಧಾತುಕ್ಷಯದಿಂದಾಗಿ ಶರೀರವು ಕೃಶವಾಗಿ ತೋರುವುದು. ಆದಕಾರಣದಿಂದಲೇ ದೇಹವು ದುರ್ಬಲವಾಗಿರುವುದು. ಚೇಷ್ಟೆಗೆಂದು ನೀವು ಮಾತನಾಡಿದರೂ ಅದು ವಿಪರೀತವಾಗಿ ಕಲಹದಲ್ಲಿ ಪರ್ಯವಸಾನ ಹೊಂದುವುದು. ಆದಕಾರಣ ಮಿತಭಾಷಿಯಾಗಿರುವುದೊಳ್ಳಿತು. ಕಾಯಕಷ್ಟದಿಂದ ದುಡಿದ ಧನವು ಕೈಯಲ್ಲಿ ನಿಲ್ಲದೆ ಕೂಡಲೇ ದೇಹದ ಸಲುವಾಗಿ ಯಾ ಭಯ ನಿವಾರಣೆಯ ಸಲುವಾಗಿ ವ್ಯಯವಾಗುವುದು. ತಾ ೨೬ ೨೭, ೨೮ ಮತ್ತು ೩೧ ಈ ದಿನಗಳಲ್ಲಿ ಇಷ್ಟಾನ್ನಭೋಜನ ಶಯನ ಸುಖ, ಧನ ಲಾಭ.

## ಮೀನ

ದೈವಾನುಗ್ರಹದಿಂದಾಗಿ ನಿಮ್ಮ ಮನೋರಥಗಳು ಕಾರ್ಯರೂಪದಲ್ಲಿ ಏನೊಂದೂ ವಿಘ್ನಗಳಿಲ್ಲದೆ ಕೊನೆಗೊಳ್ಳುವವು. ನಿಮ್ಮ ಶ್ರಮದಿಂದಾಗಿ ವಿವಿಧ ವಸ್ತ್ರ ಲಾಭ, ಧನಲಾಭಾದಿಗಳು ಆಗಲಿವೆ. ಆದರೂ “ರಾವಣನ ಹೊಟ್ಟೆಗೆ ಕಾಸಿನ ಮಜ್ಜಿಗೆ” ಎಂಬಂತೆ ನಿಮ್ಮ ಹಲವಾರು ಖರ್ಚುಗಳಿಗೆ ಇದು ಏನೂ ಸಾಕಾಗದು ಅಕಸ್ಮಾತ್ ನಿಮಗೆ ಸಂಭವಿಸುವ ಪ್ರಯಾಣದಲ್ಲಿ ನಾನಾ ವಿಧ ತೊಂದರೆಗೀಡಾಗುವಿರಿ. ಆದರೆ ಪುಣ್ಯಕ್ಷೇತ್ರ ತೀರ್ಥಾದಿಗಳ ದರ್ಶನ ಲಾಭವಾಗುವುದು. “ಶ್ರೇಯಾಂಸಿ ಬಹುವಿಘ್ನಾನಿ” ಎಂದರೆ ನಿಮ್ಮ ಕಲ್ಯಾಣಕಾರಿಯಾದ ಕಾರ್ಯಗಳಿಗೆ ವಿಘ್ನಶಕಗಳು ಬಂದು ಪೀಡಿಸುವವು. ದೇಹದಲ್ಲಿ ಕಜ್ಜಿ, ಹುಣ್ಣು ವಗೈರೆ ಗಾಯಗಳು ಆಗಲಿವೆ. ಜಾಗರೂಕರಿಗೆ ತಪ್ಪುವದು ಕಷ್ಟ ೨೬, ೨೮ ಮತ್ತು ೩೧ ವಿಶೇಷ ಹಾನಿಯ ದಿನಗಳಾಗಿವೆ

—ಬಾಲಭಾಸ್ಕರ.

## ಎಲ್ಲಾ ವಹಿವಾಟುಗಳಿರುವ ವೆಲ್ಲೂರು ಜೈಲು!

(೧೪ನೆ ಪುಟದಿಂದ.)

ಒಂದನೇ ಬ್ಲೋಕು' ಇದೆ. ಹೀಗೆ ಪ್ರಾರಂಭದ ಸುತ್ತು ವರ್ತುಲಾಕಾರವಾಗಿ ಬಂದು ಬಲಗಡೆಯಲ್ಲಿ ಅಂದರೆ ಬಡಗುದಿಕ್ಕಿಗೆ ಅಂತ್ಯವಾಗುವ ಕೊನೆಯಲ್ಲಿ 'ಸಣ್ಣ ಕಾಂಜಾ ಆಫೀಸು' ಇದೆ. ಇದು ಒಳಗಿನ ಸುತ್ತಿನ ಮಾತಾಯಿತು. ಈ ಒಳಸುತ್ತಿನ ಹಿಂಭಾಗದಲ್ಲಿರುವ ರಸ್ತೆಗೆ ತಾಗಿ ಹೊರಗಿನ ಸುತ್ತಾಗಿ ಕೆಲಸಗಳ ಬ್ಲೋಕುಗಳಿವೆಯಷ್ಟೆ. ಮೆಯಿನ್ ಗೇಟಿನ ಎಡಗಡೆಯಿಂದ,ಬೂಟ್ಸಿನ ಕಾರ್ಖಾನೆಯು ಮೊದಲನೆಯದಾಗಿ ಪ್ರಾರಂಭವಾಗುವ ಆ ಸುತ್ತುಕೂಡ ಬಂದು, ಈ 'ಸಣ್ಣಕಾಂಜಾ ಆಫೀಸು' ಇರುವಲ್ಲಿ ಕೊನೆಗೊಳ್ಳುತ್ತದೆ. ಹೀಗೆ ಮಹಾದ್ವಾರದ ಬಲಗಡೆ, ಅಂದರೆ ಬಡಗುದಿಕ್ಕಿನಲ್ಲಿ ಹಿಂಬದಿಯಲ್ಲಿ ಸಣ್ಣ ಕಾಂಜಾ ಆಫೀಸು, ಮುಂಬದಿಯಲ್ಲಿ' ಕನ್ವಿಕ್ಟ್ ವಾರ್ಡರರ (ದೀರ್ಘಾವಧಿ ಶಿಕ್ಷೆಗೊಳಗಾಗಿ ಸರ್ವಿಸಿನ ಬಲದಿಂದ ವಾರ್ಡರರಾಗಿ ನೇಮಕ ಹೊಂದಿದ ಕೈದಿಗಳ) ಬ್ಲೋಕು ಇದೆ. ಇವೆರಡರ ನಡುವೆ ಕಟ್ಟೆಗೆ ದಾಸ್ತಾನಿಡುವ ದೊಡ್ಡ ಕಟ್ಟಡವಿದೆ. ಇನ್ನು 'ಸಣ್ಣಕಾಂಜಾ ಆಫೀಸು' ಎಂದಿಷ್ಟೇ ಹೇಳಿದರೆ ಅದೇನೆಂಬುದು ನಿಮಗರ್ಥವಾಗಲಾರದು. ಫಾಶಿಶಿಕ್ಷೆಗೆ ಗುರಿಯಾದವರನ್ನು ಗಲ್ಲಕ್ಕೇರಿಸುವ ವರೆಗೆ ಈ ಸಣ್ಣಕಾಂಜಾ ಆಫೀಸಿನಲ್ಲಿಡುತ್ತಾರೆ. ನಿಶ್ಚಯವಾಗಿಯೂ ಕೆಲವೇ ದಿನಗಳೊಳಗೆ ಸಾಯಲಿರುವ ಒಬ್ಬೊಬ್ಬರನ್ನೇ ಇಟ್ಟುಕೊಳ್ಳಬಲ್ಲ ಸಣ್ಣಸಣ್ಣ ಕೋಣೆಗಳ ಸಾಲಿಗೆ 'ಸಣ್ಣ ಕಾಂಜಾ ಆಫೀಸು' ಎಂದು ಹೆಸರು. ಆ ಕೋಣೆಗಳ ಕಾರ್ಣಿಕವೆಂತಹದೆಂಬುದನ್ನು ಒಂದಿಷ್ಟು ಯೋಚಿಸಿ ನೋಡಿ. ಬೇರೆ ಕೋಣೆಗಳಲ್ಲೋ, ಮನೆಮಠಗಳಲ್ಲೋ ಇದ್ದವರು, ಹೊರಟು ನಾಲ್ಕು ಹೆಜ್ಜೆಯಿಟ್ಟಾಗಲೇ ಮೃತ್ಯುವನ್ನಿದಿರುಗೊಂಡ ನಿದರ್ಶನಗಳು ಅಪರೂಪದಲ್ಲಿರಬಹುದು; ಆದರೆ ಈ ಕೋಣೆಯಲ್ಲಿದ್ದವರು, ಹೊರಗೆ ಹೊರಡುವದೆಂದರೆ, ಮೃತ್ಯುವಿನ ದವಡೆಗೆಂಬುದಂತೂ ಸಿದ್ಧಾಂತ! ಇನ್ನು ಜೈಲಿನ ದಕ್ಷಿಣ ದಿಕ್ಕಿನಲ್ಲಿ ಕೆಲಸದ ಬ್ಲೋಕಿನ ಹಿಂಬದಿಯಲ್ಲಿ ವಿಸ್ತಾರವಾದ ದೊಡ್ಡ ಕಾಂಜಾ ಆಫೀಸಿದೆ ಇಲ್ಲಿ ಕಪ್ಪುಟೊಪ್ಪಿಯವರನ್ನು ಅಂದರೆ ಮೇಲಿಂದ ಮೇಲೆ ಜೈಲು ಯಾತ್ರೆ ಮಾಡಿದವರನ್ನು ಒಬ್ಬೊಬ್ಬರನ್ನೊಂದೊಂದರಲ್ಲಿ ತುಂಬಿಸಿಡುವಂತಹ ಐನೂರು ಕೋಣೆಗಳಿವೆ. ಅವರಿಗೆ ಮಿಕ್ಕ ಕೈದಿಗಳೊಡನೆ ಸಂಪರ್ಕವಿರಬಾರದೆಂಬುದಕ್ಕಾಗಿ, ಈ ದೊಡ್ಡಕಾಂಜಾ ಆಫೀಸನ್ನು ಜೈಲಿನ ಮಿಕ್ಕ ಭಾಗದಿಂದ ಒಂದು ಗೋಡೆಯು ಪ್ರತ್ಯೇಕಿಸುತ್ತದೆ. ಇನ್ನು, ವಿಶೇಷವಾಗಿ ಗಂಡುಕಾಯಿ ಮರಗಳು, ಬಾಳೆ ಮೊದಲಾದವುಗಳಿರುವ ತೋಟಗಳು, ಅರಿವೆ ಮೊದಲಾದ ತರಕಾರಿಗಳ ಹಿತ್ತಲುಗಳು, ಜೈಲುಪಾಗಾರದ ಒಳಗಡೆಯಲ್ಲಿಯೇ ಇವೆ, ಹೊರಗಂತೂ ದೊಡ್ಡ ದೊಡ್ಡ ತೋಟಗಳಿವೆ. ನಿಮಗೆ ನಾನು, ಇನ್ನೂ ವಿಶೇಷವಾಗಿ ಜೈಲು ವಿಸ್ತಾರದ ವರ್ಣನೆ ಮಾಡುವದಿಲ್ಲ. ನೀವು ವೆಲ್ಲೂರುಜೈಲಿನ ಮಹಾದ್ವಾರವನ್ನು ಪ್ರವೇಶಿಸಿದಿರೆಂದಿಟ್ಟುಕೊಳ್ಳಿ. ಹಾಗೆ ಪ್ರವೇಶಿಸುವಾಗಲೇ ಕುತ್ತಿಗೆಯು ಬುಡಕ್ಕೆ ಬೀಳುವ ಆ ಖಾಯಂಗುದ್ದಿನಿಂದಅಲ್ಲಿಮುಗ್ಗರಿಸಿ ಬಿದ್ದಿರಾದರೆ ಆ ದ್ವಾರವನ್ನು ಬಿಟ್ಟು ಹೇಗೂ ಕದಲಲಾರಿರಲ್ಲ! ಒಂದೊಮ್ಮೆಗೆ ಮುಂದರಿದು ಎರಡು ಸುತ್ತುಗಳ ಮಧ್ಯದಲ್ಲಿರುವ ರಸ್ತೆ ಹಿಡಿದು ನಡೆಯಲಾರಂಭಿಸಿದಿರೆಂದು ಭಾವಿಸೋಣ. ಆ ರಸ್ತೆಯು ನಿಮ್ಮನ್ನು ಸುತ್ತಾಗಿ ಕೊಂಡು ಬಂದು,ಇನ್ನೊಂದು ಬದಿಯಲ್ಲಿ ಅದೇದ್ವಾರಕ್ಕೆತಂದು ಬಿಡುವದು- ಹೀಗೆ ನಡೆಯುವಾಗ, ನೀವು ಘಂಟೆಗೆ ಮೂರು (ಮೈಲುಗಳಂತೆ ನಡೆದರೂ, ಪುನಃ ಬಂದು ಸೇರಬೇಕಾದರೆ ಕಡಿಮೆಯೆಂದರೆ ಮೂರು ಘಂಟೆ ಬೇಕಾಗಬಹುದು. ಆ ಜೈಲೆಷ್ಟು ದೊಡ್ಡದಿದೆ ಎಂದು ನೀವೇ ಊಹಿಸಿಕೊಳ್ಳಿ!

ಆ ಕಾಲದಲ್ಲಿ ವೆಲ್ಲೂರಿನಲ್ಲಿ ಒಟ್ಟಿಗೆ ಸುಮಾರು ೧೮೦೦ ಕೈದಿಗಳಿದ್ದರು. ಇವರನ್ನು ನೋಯಿಸಲು ಸುಮಾರು ೧೦೦ ಮಂದಿ ವಾರ್ಡರರೂ ೫೦ ಜನ ಕನ್ವಿಕ್ಟ್ (ಕೈದಿ) ವಾರ್ಡರರೂ ಇದ್ದರು.

### ಜೈಲಿನ ವೈಶಿಷ್ಟ್ಯವೇನು?

ನಾನು ವೆಲ್ಲೂರಿಗೆಬಂದವನೇನಿಮಗೆ ಅಲ್ಲಿಯ ಕಟ್ಟಡಗಳನ್ನು ತೋರಿಸಲಿಕ್ಕೆ ಹತ್ತಿದೆ. ಅದನ್ನು ಮುಂದಾಗಿ ಇಷ್ಟೊಂದು ಅವಸರದಿಂದ ಹೇಳುವ ಅಗತ್ಯವಿರಲಿಲ್ಲ. ನೀವಾಗಲೀ, ನಿಮಗಾಗದವರಾಗಲೀ ಮನಸ್ಸು ಮಾಡಿದಲ್ಲಿ, ಒಂದು ದಿನ ನಿಮಗೂ ಆ ಕಟ್ಟಡಗಳನ್ನು ಕಾಣುವ ಯೋಗವು ಬರಬಹುದು! ಆ ಯೋಗವು ಅನುಕೂಲವಾದಾಗ ಬರಲಿ—ಯಾ

ವಾಗ ಬಂದರೂ ಈ ಕಟ್ಟಡಗಳು ಇದ್ದೇ ಇವೆ. ಆದರೆ ನಾನು ಹೋಗುವಾಗ ಅಲ್ಲಿ ಇದ್ದ ರಾಜಕೀಯ ಕೈದಿಗಳು? ನೀವೆಂದಾದರೊಮ್ಮೆ ಕಾಲಬಂದು ಹೋಗುವಾಗ ಅಲ್ಲಿ ಖಂಡಿತವಾಗಿ ಇರಲಾರರು. ಆದ್ದರಿಂದ ಅವರ ಕುರಿತು ಸ್ವಲ್ಪವಾದರೂ ನಿಮಗೆ ತಿಳಿಸಬೇಕಾಯಿತು.

ಆ ಮೊದಲು ಜೈಲಿನ ಒಂದು ಗುಟ್ಟನ್ನೂ ಹೇಳಿ ಬಿಡುತ್ತೇನೆ. ನೀವು ಊರಲ್ಲಿ ನಡೆಯುವ ಭಯಂಕರ ಅತ್ಯಾಚಾರಗಳ ಕತೆಗಳನ್ನು ಪತ್ರಿಕೆಗಳಲ್ಲಿ ಓದಿರಬಹುದು, ಕಿವಿಯಾರೆ ಕೇಳಿರಬಹುದು, ಕಣ್ಣಾರೆ ನೋಡಿರಬಹುದು. ನಡುರಾತ್ರೆಯಲ್ಲಿ ಊರಿಗಿಳಿದು, ಮನೆ ಮನೆಗಳನ್ನು ಲುಟಾಯಿಸಿ, ಇದಿರಾದವರನ್ನು ಗುಂಡಿಟ್ಟುಕೊಂದು, ಇಡೀ ಊರನ್ನೇ ಅಲ್ಲೋಲ ಕಲ್ಲೋಲ ಮಾಡಿ ಬಿಡುವ ಢಕಾಯಿತರು— ಹೊಲಗದ್ದೆಗಳನ್ನು ಕುರುಕ್ಷೇತ್ರವಾಗಿ ಮಾರ್ಪಡಿಸಿ ಕತ್ತಿದೊಣ್ಣೆಗಳಿಂದ ಹೊಡೆದಾಡಿಕೊಳ್ಳುವ ಭಟರು—ಕಾದುಕುಳಿತು, ಓಡಿಸಿ ಓಡಿಸಿ ತಿವಿಯುವ ವ್ಯಾಘ್ರ ಜಾತಿಯವರು- ಇಂಥವರೆಲ್ಲಾ ಎಷ್ಟು ಭಯಂಕರ ಮನುಷ್ಯರಿರಬೇಕು! ಅಂತಹ ಭೀಕರ ಜೀವಿಗಳು ಒಟ್ಟಾದಾಗ ಆ ಜೈಲಿನಲ್ಲಿ ಏನು ತಾನೆ ಮಾಡಲಾರರು? ಆದರೆ ಅಲ್ಲಿ ಅವರೆಂತಹ ಸಾಧು ಪ್ರಾಣಿಗಳಾಗಿರುವರು ಬಲ್ಲಿರಾ? ನಿಜ ಹೇಳಬೇಕಾದರೆ, ಊರಲ್ಲಿ ಯಾವ ಅನ್ಯಾಯವನ್ನು ಸಹಿಸದೆ, ಅವರು ಕತ್ತಿದೊಣ್ಣೆಗಳಿಂದ ಪ್ರತೀಕಾರವನ್ನು ಮಾಡಿ ಬಂದಿದ್ದರೋ ಅಂತಹ ಅನ್ಯಾಯವನ್ನು ಇಲ್ಲಿ ದಿನಕ್ಕೆ ಎಂಟುಹತ್ತು ಬಾರಿಯೂ ಅನುಭವಿಸುತ್ತಾರೆ; ಎಲ್ಲವನ್ನೂ ಕುರಿಗಳಂತೆ ತಡಕೊಂಡು ಬಾಳುತ್ತಾರೆ! ಜೈಲಿನೊಳಗೆ ಕಾಲಿಟ್ಟೊಡನೆ ಮನುಷ್ಯನಲ್ಲಿ ಎಂತಹ ಪರಿವರ್ತನೆಯುಂಟಾಗುತ್ತದೆಂಬುದನ್ನು ವೆಲ್ಲೂರಿನಲ್ಲಿ ನಾನು ಕಂಡ ಒಂದು ಸಂಗತಿಯೊಡನೆ ತಿಳಿಸುವೆನು. ಹೊರಗಿನ ಸಂಭಾವಿತ ಮನುಷ್ಯರು ಅಪೇಕ್ಷೆಪಟ್ಟಲ್ಲಿ, ಜೈಲಿನೊಳಗೆ ಹೋಗಿ ನೋಡಿಬರಲು ಅಧಿಕಾರಿಗಳು ಒಪ್ಪಿಗೆ ಕೊಡುವದುಂಟು. ಒಮ್ಮೆ ರಾಯರೊಬ್ಬರು ಜೈಲಿನೊಳಗೆ ನೋಡುವದಕ್ಕಾಗಿ ಬಂದಿದ್ದರು. ಅವರು ಬ್ಲೋಕುಗಳನ್ನು ನೋಡುತ್ತಾ ಹೋಗುತ್ತಿದ್ದರು. ನಾವು ಕೆಲವರು ಹುರಿಹಗ್ಗದ ಬ್ಲೋಕಿನಲ್ಲಿ ಒತ್ತಿ ಹೆಣೆಯುತ್ತಿದ್ದೆವು. ರಾಯರ ಸವಾರಿ ನಮ್ಮ ಬ್ಲೋಕಿನ ಮುಂಭಾಗದಲ್ಲಿ ಹೋಗುವ ಹೊತ್ತಿಗೆ, ನಮ್ಮೊಡನಿದ್ದ ಕೈದಿಯೊಬ್ಬನು ಓಡಿ ಹೋಗಿ ಅವರ ಎರಡೂ ಪಾದಗಳನ್ನು ಕಟ್ಟಿಕೊಂಡು ಬಿಕ್ಕಿಬಿಕ್ಕಿ ಅಳ ಹತ್ತಿದ. ಆ ಗೃಹಸ್ಥರು ಪ್ರಥಮತಃ ತಬ್ಬಿಬ್ಬಾದರು. 'ದಮ್ಮಯ್ಯ! ನೀವು ಹೇಳಿದ ಹಾಗೆ ಕೇಳುತ್ತೇನೆ. ನನ್ನನ್ನು ಬಿಡಿಸಿ-ನಿಮ್ಮ ಚಾಕರಿ ಮಾಡಿಕೊಂಡಿರುತ್ತೇನೆ' ಎಂದು ಅಳುತ್ತಾ ಪಾದ ಕಟ್ಟಿಕೊಂಡ ಕೈದಿ? ಕೆಲವು ಮಿನಿಟುಗಳ ವರೆಗೆ ಬಿಡಲಿಲ್ಲ. ವಾರ್ಡರನು ಹೋಗಿ, ಕೆನ್ನೆಗೆರಡು ತಟ್ಟಿ ಅವನನ್ನೆಳಕೊಂಡು ಬಾರದಿರುತ್ತಿದ್ದರೆ ಆ ರಾಯರಿಂದ ಹಿಡಿತವನ್ನು ಬಿಡಿಸಿಕೊಳ್ಳುವದು ಸಾಧ್ಯವಿರಲಿಲ್ಲ. ನಾವು ಆ ದಿನ ರಾತ್ರಿ ಸಂಗತಿಯೇನೆಂದು ಅವನೊಡನೆ ವಿಚಾರಿಸಿದೆವು. ಆವ ತನ್ನ ಊರಿನಲ್ಲಿ ದೊಡ್ಡ 'ಖಿಲಾಡಿ'ಯಾಗಿದ್ದವನಂತೆ. ಇಚ್ಛೆ ಬಂದವರಿಗೆ ಹೊಡೆದೇ ಬಿಡುವ ಮನುಷ್ಯನಾಗಿದ್ದನಂತೆ. ಊರವರೆಲ್ಲಾ ಅವನ ಹೆಸರು ಕೇಳಿದೊಡನೆ ಹೆದರುತ್ತಿದ್ದರು. ಜೈಲು ನೋಡಲು ಬಂದ ಆ ರಾಯರು ಆ ಊರಿನ ಸಂಭಾವಿತ ಮನುಷ್ಯರು. ಯಾರ ಗೋಜಿಗೂ ಹೋಗದೆ, ಸಂಭಾವಿತತನದಲ್ಲಿಯೇ ಸಣ್ಣಪುಟ್ಟ ಉಪಕಾರಗಳನ್ನು ಊರವರಿಗೆ ಮಾಡಿಕೊಂಡು ಇದ್ದವರು. ಒಮ್ಮೆ ಯಾವುದೇ ಒಂದು ವ್ಯಾಜ್ಯವನ್ನು ಕಾರಣವಾಗಿಟ್ಟುಕೊಂಡು, ರಾಯರಿಗೆ 'ಆವ ನನಗೆ ಸಿಕ್ಕಲಿ; ಮೆಟ್ಟಿನಲ್ಲಿ ಹೊಡೆದು ಬಿಡುತ್ತೇನೆ!' ಎಂದು ಹೇಳುತ್ತಾ ಬಂದ ಈ ಖಿಲಾಡಿ ರಾಯರಿಗೀ ವರ್ತಮಾನ ಹೋಯಿತು. 'ಅವ ನಾನಿದ್ದಲ್ಲಿ ಬಂದು ಕ್ಷಮೆ ಕೇಳದಿದ್ದರೆ ಫಿರ್ಯಾದಿ ಮಾಡುತ್ತೇನೆ' ಎಂದು ಹೇಳಿ ಕಳುಹಿಸಿದರು. 'ಆ ಘಟಿಂಗನೊಡನೆ ಜೀವವಿರುವವರೆಗೆ ಕ್ಷಮೆ ಕೇಳಲಾರೆ; ಅವ ಒಮ್ಮೆ ಸಿಕ್ಕಲಿ ನನಗೆ!' ಎಂದು ಇವನ ಉತ್ತರ. ಸರಿ ಇವ ಹಿಂದೆ ಹೊಡೆದಿದ್ದ, ಬೈದಿದ್ದ ಎಲ್ಲಾ ಅಪರಾಧಗಳನ್ನೂ ಒಟ್ಟು ಗೂಡಿಸಿ ಇವನ ಮೇಲೆ ಊರವರೆಲ್ಲಾ ಕೇಸು ಮಾಡಿದರು. ಇವನಿಗೆ ಎರಡು ವರ್ಷ ಶಿಕ್ಷೆ ಕೊಟ್ಟು ವೆಲ್ಲೂರಿಗೆ ಕಳುಹಿಸಿದರು. ಆ ರಾಯರು ಯಾವುದೋ ಕೆಲಸದ ಮೇಲೆ ವೆಲ್ಲೂರಿಗೆ ಬಂದವರು ಜೈಲು ನೋಡಲು ಬಂದಿದ್ದರು. ಆಗ ಇವ ಜೈಲಿಗೆ ಬಂದು ಏಳುತಿಂಗಳುಗಳಾಗಿದ್ದವು ಮಾತ್ರ. ಅಂದು 'ಕ್ಷಮೆ ಕೇಳುವದೆ? ನೋಡಲಿಕ್ಕೊಮ್ಮೆ ಸಿಕ್ಕಲಿ!' ಎಂದಿದ್ದ ಆಸಾಮಿ ಇಂದು ನೋಡಿದವನೇ ಓಡಿ ಬಂದು ಕಾಲು ಹಿಡಿದು 'ದಮ್ಮಯ್ಯ!' ಎನ್ನುತ್ತಾನೆ;

ಅದೂ ನಿರರ್ಥಕವಾಗಿ ದಮ್ಮಯ್ಯ ಹಾಕುತ್ತಾನೆ!

ಕಾರಣವಿಷ್ಟೆ. ಹೊರಗೆ ಅವ ನೆಂತಹ ಕಠಿನ ಮನುಷ್ಯನೇ ಇರಲಿ, ಜೈಲು ಗೇಟಿನೊಳಗೆ ಕಾಲಿಟ್ಟನೆಂದ ರಾಯಿತು-ಬೆಕ್ಕು ಹಿಡಿದ ಹಕ್ಕಿ ಯಂತೆ ಮುರುಟಿ ಹೋಗುತ್ತಾನೆ! ವಾರ್ಡರರು ಅವರನ್ನು ಅಮುಕುವ ಮೊದಲೇ 'ನಾನು ಜೈಲಿಗೆ ಹೋಗು ತ್ತೇನಲ್ಲಾ' ಎಂದು, ಅವನ ಹೃದ ಯವು ಅವನನ್ನು ಅಮುಕಿಹದಗೆಡಿಸಿ ಬಿಡುತ್ತದೆ. ಯಾವದಾದರೊಂದು ಕಲೆ ಯಲ್ಲಿ ದಾಖಲೆ ಮುರಿದ ಅಗ್ರಗಣ್ಯ ರನ್ನು ನೋಡಬೇಕೆಂಬ ಹಂಬಲು ಮನುಷ್ಯ ಮಾತ್ರರಿಗುಂಟಷ್ಟೆ. ಹೀಗೆ 'ಬಚ್ಚಾಳಿಗಿರಿ'ಯಲ್ಲಿ ಪ್ರವೀಣರಾದ ವರನ್ನು ನೋಡೋಣ-ಅವರ ಭಾವ ಭಂಗಿಯನ್ನು ತಿಳಿಯೋಣವೆಂದು ನೀವು ಜೈಲಿನೊಳಗೆ ಬಂದಿರಾದರೆ ಅಲ್ಲಿ ಅಂಥವರನ್ನು ಕಾಣಲಾರಿರಿ! ಜೋಲು ಮೋರೆಯ ಪರಮಾವಧಿ ಯನ್ನು' ದೀನ ಮುಖಮುದ್ರೆಯ ಉತ್ತಮ ಮಾದರಿಯನ್ನು ಕಾಣ ಬೇಕೋ-ಜೈಲಿಗೆ ಬನ್ನಿರಿ! 'ಮನು ಷ್ಯನ ಮನಸ್ಸೇ ಎಲ್ಲಾ ಆಗು ಹೋಗುಗಳಿಗೂ ಕಾರಣ'ವೆಂಬು ದಕ್ಕೆ ಯೋಗ್ಯ ನಿದರ್ಶನಬೇಕೋ- ಜೈಲಿಗೆ ಬನ್ನಿರಿ! ಹಿಂದೊಮ್ಮೆ ಒಂದು ಕಡೆಯಲ್ಲಿ 'ಮನಸ್ಸೇ ಕಾರಣ' ವೆಂಬ ತತ್ವದ ಪರೀಕ್ಷೆ ಮಾಡುವ ಮನಸ್ಸು ಕೆಲವು ಪ್ರೊಫೆಸರರಿಗಾ ಯಿತಂತೆ. ಅದಕ್ಕಾಗಿ ಮರಣ ಶಿಕ್ಷೆಗೆ ಗುರಿಮಾಡಲ್ಪಟ್ಟ ಕೈದಿ ಯೊಬ್ಬನನ್ನು ಒಂದು ಕೋಣೆಯಲ್ಲಿ ಹಾಕಿ ಕಣ್ಣನ್ನು ಭದ್ರವಾಗಿ ಕಟ್ಟಿ ದರು. "ಈಗ ನಿನ್ನ ಮೈಯ್ಯ ರಕ್ತ ವನ್ನು ತೆಗೆದು ಕೊಲ್ಲಲಾಗುವದು. ಶಾಂತತೆಯಿಂದ ಪ್ರಾಣ ಬಿಡು!" ಎಂದರು. ಆ ಮೇಲೆ ಅವನ ಹತ್ತಿ ರದಲ್ಲಿ ಸಪೂರ ನಳಿಗೆಯೊಂದರಿಂದ ನೀರನ್ನು ಕೆಳಕ್ಕೆ ಸುರಿಸಹತ್ತಿದರು. ನಳಿಗೆಯ ನೀರು ಸುರುಸುರು ಸುರಿ ಯುತ್ತಿದ್ದಂತೆ ಕೈದಿ ನಿತ್ರಾಣವಾ ಗುತ್ತಾ ಬಂದು, ಒಂದು ಘಂಟೆ ಯೊಳಗೆ ಪ್ರಾಣ ಬಿಟ್ಟ! ಅವನ ಮೈ ಯಿಂದ ಒಂದೇ ಒಂದು ಹನಿರಕ್ತವು ಹೋಗಿರಲಿಲ್ಲವಾದರೂ ಅವನ ಮನ ಸ್ಸಿಗೆ 'ರಕ್ತವು ಹೋಗುತ್ತಾ ಬಂತು-ಸಾಯುತ್ತಿದ್ದೇನೆ' ಎಂದು ಖಂಡಿತವಿದ್ದುದರಿಂದ ಸತ್ತೇ ಹೋದ! ಜೈಲೊಳಗಿದ್ದವರ ಮನೋ ಸ್ಥಿತಿ ಹೀಗೆಯೇ. ಮಿಕ್ಕವುಗಳಿಗಿಂತ ಮಿಗಿಲಾಗಿ ಕೈದಿಗಳ ಮನಸ್ಸೇ ಕೈದಿ ಗಳನ್ನು ತಿನ್ನುತ್ತದೆ!

**ಈ ಬಾರ ಕೈದಿಗಳ ಹೃದ ಯವನ್ನು ಸುಡುವ ಬೆಂಕಿ ಯನ್ನಷ್ಟೇ ತೋರಿಸಿದೆ; ಬಾಯಿಯಲ್ಲಿ ಹೊರಡುವ ಹೊಗೆ (ಅದು ಆ ಬೆಂಕಿಯು ದಲ್ಲ-ಬೀಡಿಯಹೊಗೆ) ಯ ನ್ನು ತೋರಿಸಿ ಕೊಡಲು ಈ ಬಾರಿಸಾಧ್ಯವಾಗಲಿಲ್ಲ. ನೀವು ಇಲ್ಲಿ ಬಿಡುವ ಹೊಗೆಗೂ, ನಾವು ಅಲ್ಲಿ ಬಿಟ್ಟ ಹೊಗೆ ಗೂ ಅಜಗಜಾಂತರವಿದೆ. ನಮ್ಮ ಹೊಗೆಯೆಂದರೆ ಹಲ ವು ಕಟ್ಟಳೆಗಳನ್ನು ಸುಟ್ಟು ಹೊರಡಿಸಿದ ಹೊಗೆ! ಆ ವಿಷಯವನ್ನು ಮುಂದಿನ ಸಂಚಿಕೆಯಲ್ಲಿ ತಿಳಿಸುವೆನು.**

## ನನಗರಿಯದು-ನಿಮಗೆ



ನಂ-ದನವು ಹಾಲು ಕೊಡುತ್ತದೆಯೇ?









# ಅಂತರಂಗದ ಎರಡನೆಯ ಸ್ಪರ್ಧೆ.

**ನಾಲ್ಕಾಣೆಗಳಿಗೆ**

# 25/-

**ರೂಪಾಯಿಗಳನ್ನು**
**ಪಡೆಯಿರಿ.**

## ಪ್ರಥಮ ಬಹುಮಾನ:- ರೂಪಾಯಿ ೨೫. [ನಗದಿ.]

ದ್ವಿತೀಯ ಬಹುಮಾನ ರೂಪಾಯಿ ೧೫ (ಪುಸ್ತಕಗಳು. )
ತೃತೀಯ ಬಹುಮಾನ ರೂಪಾಯಿ ೧೦ (ಪುಸ್ತಕಗಳು.)

✓ ಈ ಸ್ಪರ್ಧೆಯ ಉತ್ತರವು ಅಂತರಂಗದ ಸಂಪಾದಕರ ಬಳಿ ಮೊಹರು ಮಾಡಿಡಲಾಗಿದೆ.

✓ ಅದಕ್ಕೆ ಪ್ರತಿ ಅಕ್ಷರವೂ ಸರಿಹೋಲುವ ಉತ್ತರಕ್ಕೆ ಪ್ರಥಮ ಬಹುಮಾನವೂ, ಒಂದು ಮತ್ತು ಎರಡು ತಪ್ಪಿರುವವುಗಳಿಗೆ ಎರಡು ಮತ್ತು ಮೂರನೆ ಬಹುಮಾನಗಳೂ ಕೊಡಲ್ಪಡುವುವು.

ಬಹುಮಾನ ಪುಸ್ತಕಗಳ ಪಟ್ಟಿಯನ್ನು ಉತ್ತರ ಪ್ರಕಟಿಸುವ ಸಂಚಿಕೆಯಲ್ಲಿಯೇ ಕೊಡಲಾಗುವುದು. ಅದರಲ್ಲಿ ಆರಿಸಿ ಯಾವುದನ್ನಾದರೂ ಪಡಕೊಳ್ಳಬಹುದು.

✓ ಬಹುಮಾನಕ್ಕೆ ಯೋಗ್ಯವಾದ ಉತ್ತರಗಳು ಒಂದಕ್ಕಿಂತ ಹೆಚ್ಚಾದಲ್ಲಿ ಮೇಲ್ಕಂಡ ಬಹುಮಾನಗಳು ಎಲ್ಲರಿಗೂ ಸರಿಸಮಾನವಾಗಿ ಹಂಚಲ್ಪಡುವುವು.

✓ ಬಹುಮಾನವನ್ನು ಹಂಚುವ ವಿಚಾರ ಸ್ಪರ್ಧೆಯ ಮೆನೇಜರರಿಗೆ ಸೇರಿದೆ. ಈ ವಿಚಾರದಲ್ಲಿ ಯಾವ ಪತ್ರವ್ಯವಹಾರಗಳಿಗೂ ಅವಕಾಶವಿಲ್ಲ.

- **ಪ್ರತಿ ಉತ್ತರಕ್ಕೂ ಪ್ರವೇಶಧನ ನಾಲ್ಕಾಣೆ.**

**ಒಬ್ಬನು ಎಷ್ಟೂ ಉತ್ತರಗಳನ್ನು ಕಳುಹಿಸ ಬಹುದು. ಒಂದು ರೂಪಾಯಿಗೆ ಐದು ಉತ್ತರಗಳನ್ನು ಕಳುಹಿಸಬಹುದಾಗಿದೆ.**

ಗೆಳೆಯರ ತಂಡದ ಸದಸ್ಯರು ಒಂದು ರೂಪಾಯಿಗೆ ಎಂಟು ಉತ್ತರಗಳನ್ನು ಕಳುಹಿಸಬಹುದು.

- ಪ್ರ ಶ ಧನವನ್ನು ಪೋಸ್ಟಲ್ ಸ್ಟಾಂಪು, ಇಂಡಿಯ. ೋಸ್ಟಲ್ ಆರ್ಡರ್ ಅಥವಾ ಮನಿ ಆರ್ಡರ್ ಮೂಲ ರವಾನಿಸಬಹುದು.

- ಉತ್ತರವನ್ನು ಬರೆಯುವವರು ಜನವರಿ ೮ರೊಳಗೆ ಬರೆದು ಕಳುಹಿಸಬೇಕು. ನಂತರ ಈ ಸ್ಪರ್ಧೆಗಾಗಿ ಕಳುಹಿಸುವ ಉತ್ತರಗಳನ್ನು ಸ್ವೀಕರಿಸುವುದಿಲ್ಲ.

- ಸರಿಯಾದ ಉತ್ತರವನ್ನು ಜನವರಿ ೧೫ರ "ಅಂತರಂಗ"ದಲ್ಲಿ ಪ್ರಕಟಿಸಲಾಗುತ್ತದೆ.

**ಈ ಸ್ಪರ್ಧೆಯ ಉತ್ತರಗಳು ಅಂತರಂಗದ ಕೂಪನಿನಲ್ಲಿಯೇ ಬರೆಯಲ್ಪಡಬೇಕು.**
**ಈ ಕೂಪನುಗಳು ದಶಂಬರ ತಿಂಗಳ ಸಂಚಿಕೆಗಳಲ್ಲಿ ಪ್ರಕಟಿಸಲ್ಪಡುತ್ತವೆ.**
**ಉತ್ತರ ಕೊಡುವವರು ತಮ್ಮ ಪೂರ್ಣ ವಿಳಾಸವನ್ನು ಬರೆಯತಕ್ಕದ್ದು.**

**ಮೆನೇಜರ್, ಅಂತರಂಗ ಸ್ಪರ್ಧೆ, ಉಡುಪಿ.**

Printed and published by P. Venkataramanacharya for and on behalf of SUPPLY AGENCY LTD., at Manipal Power Press, Udipi.

| | | | | | | |
|---|---|---|---|---|---|---|
| ನ | ಬಿ | ಬ. | | ಘ | ಘಂ | ಪ. |
| ತ | | | ಟ್ಟ | | | ಶ್ವ |
| ಶ | | ಸ | ಸ | ಪ | | [illegible] |
| | ಷ | ಮ | | ಟಿ | ಷಿ. | |
| ಶ | | ನೆ. | ಸ | ಖಿ | | ಟ್ರ |
| ಷ | | | ತ | | | ತಾ |
| [illegible] | ಟ | ವ. | | ತಂ | ಶಾ. | ಟಿ |

**ಎಡದಿಂದ ಬಲಕ್ಕೆ:—**

೧ರಿಂದ ೩ ...ನೇತ್ರ್ರಯರನ್ನು ಪುರುಷರು ನೆಚ್ಚುತ್ತಾರೆ.

೪ ,, ೬ ಷಟ್ಪದಿಗಳಲ್ಲೊಂದು.

೧೧ ,, ೧೩ ಪಾಪಿಗಳು . . . ಕ್ಕೆ ಹೋಗುವರೆಂದು ಸಾಮಾನ್ಯ ಜನರ ನಂಬಿಗೆ.

೧೪ ,, ೧೬ ಯಶಸ್ಸು.

೧೭ ,, ೧೮ ಉಪ್ಪಿಗಿಂತ . . . . . ಇಲ್ಲ ತಾಯಿಗಿಂತ ಬಂಧುವಿಲ್ಲ.

೨೧ ,, ೨೨ ರೋಗಿಗಳು . . . . .ತ್ತಾರೆ.

೨೭ ,, ೨೯ ನಾಟಕದಲ್ಲಿ ಇದು ಮುಖ್ಯ.

೩೧ , ೩೨ ಜ್ಞಾನವುಂಟಾಗಬೇಕಾದರೆ ಬುದ್ಧಿ . . . ವಾಗಬೇಕು.

---

**ಮೇಲಿನಿಂದ ಕೆಳಗೆ: –**

೧ರಿಂದ೧೦ ಶರಧಿ.

೧೯ ,, ೨೭ ಕಾಯಿದೆ.

೮ ,, ೧೨ ಕೋಗಿಲೆಯು . . . ವುಇಂಪೆಂದು ಕವಿಗಳು ವರ್ಣಿಸುತ್ತಾರೆ.

೧೧ ,, ೨೦ ಕರ್ನಾಟಕವು . . . .ಮನೋಹರವಾದ ನೈಸರ್ಗಿಕ ದೃಶ್ಯಗಳಿಂದ ಕೂಡಿದೆ.

೨೧ ,, ೨೫ ಸೂರ್ಯ.

೧೩ ,, ೨೨ ಇದು ಹೊಟ್ಟೆಯೊಳಗಿದೆ.

೬ ,, ೧೪ ಹೆಚ್ಚಿನವರು ಇದನ್ನು ಬೆದರುತ್ತಾರೆ.

೨೩ ,, ೩೨ ಜವಾಹರಲಾಲರು ಯುರೋಪಿನ . . . . ವನ್ನು ಮುಗಿಸಿ ಬಂದಿದ್ದಾರೆ.

---

ಪ್ರಸಿದ್ಧ ಜೈನ ಕ್ಷೇತ್ರವಾದ
ವೇಣೂರಲ್ಲಿ ಜರಗಲಿರುವ

# ಪಂಚಕಲ್ಯಾಣ

## ಮಹೋತ್ಸವ ಕಾಲದಲ್ಲಿ···

●

ತಾರೀಕು 29—1—1939 ರ

## ಅಂತರಂಗವು

# ವಿಶೇಷ ಸಂಚಿಕೆಯ

## ರೂಪದಲ್ಲಿ ಹೊರಡಲಿರುವುದು

●

ಜೈನಮತಕ್ಕೆ ಸಂಬಂಧಿಸಿದ ಅನೇಕ ಲೇಖನಗಳೂ, ಚಿತ್ರಗಳೂ, ಇತರ ವಿವರಗಳೂ ಈ ಸಂಚಿಕೆಯಲ್ಲಿ ಪ್ರಕಟವಾಗಲಿವೆ------

**ಪ್ರತಿಯೊಂದು ಜೈನಗೃಹಕ್ಕೂ ಅಲಂಕಾರ
ಪ್ರಾಯವಾಗಿ ಮೆರೆಯಲಿದೆ ಈ ಸಂಚಿಕೆ**

**ಜಾಹಿರಾತಿನ ದರಗಳಲ್ಲಿ
ಹೆಚ್ಚು - ಕಡಿಮೆ - ಇಲ್ಲ**



| | |
|---|---|
| ಇಡೀ ಪುಟಕ್ಕೆ | ೧೦-೦-೦ |
| ಅರ್ಧ ,, | ೫-೦-೦ |
| ಕಾಲು ,, | ೩-೦-೦ |
| ಅರೆಕಾಲು ಪುಟ | ೨-೦-೦ |
| ಕಲಮಿನ ಒಂದಿಂಚಿಗೆ | ೧-೦-೦ |



**ಜಾಹಿರಾತುದಾರರಿಗೆ
ಇದಕ್ಕಿಂತ ಉತ್ತಮ
ಸಂದರ್ಭ ಬೇರೊಂದು
ದೊರಕಲಾರದು**

**ಮೆನೇಜರ್ - - - ಅಂತರಂಗ - - - ಉಡುಪಿ**